ಪ್ರಜಾವಾಣಿ ಗುರುವಾರ 25ನೇ ಡಿಸೆಂಬರ್ 2014

## ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಬಂಜಗೆರೆ ಅಭಿಪ್ರಾಯ

# 'ಗಾಂಧಿ ಹೆಸರು ಕೆಡಿಸಿದ್ದು ಆರ್‌ಎಸ್‌ಎಸ್'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಗಾಂಧಿ ಟೋಪಿ, ಖಾದಿ ಬಟ್ಟೆ ಧರಿಸುವುದು ಭಾರತದಲ್ಲಿ ಮಾಮೂಲಿ ಆಚಾರವಾಗಿಬಿಟ್ಟಿದೆ. ಗಾಂಧಿ ಹೆಸರನ್ನು ಕೆಡಿಸಿದವರು ಇದ್ದರೆ ಅವರು ಕಪಟ ಗಾಂಧೀವಾದಿಗಳು, ಆರ್.ಎಸ್.ಎಸ್‌ನವರು ಮಾತ್ರ' ಎಂದು ಕನ್ನಡ ಪುಸ್ತಕ ಪ್ರಾಧಿಕಾರ ಅಧ್ಯಕ್ಷ ಡಾ.ಬಂಜಗೆರೆ ಜಯಪ್ರಕಾಶ್ ಅಭಿಪ್ರಾಯಪಟ್ಟರು.

ಗಾಂಧಿ ಶಾಂತಿ ಪ್ರತಿಷ್ಠಾನವು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ವೂಡೇ ಪ್ರತಿಷ್ಠಾನ ಸಹಯೋಗದೊಂದಿಗೆ ಗಾಂಧಿ ಭವನದಲ್ಲಿ ಬುಧವಾರ ಆಯೋಜಿಸಿದ್ದ ಡಬ್ಲ್ಯು.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಕಾರ್ಯಕ್ರಮದಲ್ಲಿ ಗಾಂಧೀಜಿ ಆತ್ಮಕಥೆ 'ನನ್ನ ಸತ್ಯಾನ್ವೇಷಣೆ' ಕುರಿತು ಉಪನ್ಯಾಸ ನೀಡಿದರು.

'ಗಾಂಧಿಯನ್ನು ವ್ಯಕ್ತಿಗತವಾಗಿ ವಿರೋಧಿಸಲು ಕಾರಣಗಳೇ ಇಲ್ಲ. ಗೋಡ್ಸೆ ರೀತಿಯ ಪೂರ್ತಿ ಮಿದುಳು, ಹೃದಯ ಇಲ್ಲದ ಯಂತ್ರವಲ್ಲದೆ ಗಾಂಧಿಯನ್ನು ವಿರೋಧಿಸಲು ಶತ್ರುಗಳಿಗೂ ಸಾಧ್ಯವಿಲ್ಲ' ಎಂದರು.

'ಹಿಟ್ಲರನ ಮರು ಅವತಾರದಂತೆ ಗೋಚರಿಸುವ ನರೇಂದ್ರ ಮೋದಿ ಕಡಿಮೆ ಜನರ ಪಾಲುದಾರಿಕೆಯಲ್ಲಿ ಹೆಚ್ಚು ಆಡಳಿತ ಮಾಡುತ್ತೇನೆ ಎನ್ನುವ ಅರ್ಥದಲ್ಲಿ ಹೇಳುತ್ತಿದ್ದಾರೆ. ಸಂಸದರು, ಮಂತ್ರಿಗಳ ನೆರವು ಅವರಿಗೆ ಬೇಕಿಲ್ಲ. ಕಾರ್ಯದರ್ಶಿಗಳು ಇದ್ದರೆ ಸಾಕು ಎಂಬುದು ಅವರ ನಿಲುವು. ಅತಿಯಾಗಿ ವೈಭವೀಕರಿಸಿಕೊಳ್ಳುವ ವ್ಯಕ್ತಿ ಮಾತ್ರ ಈ ರೀತಿ ಮಾತನಾಡುತ್ತಾರೆ' ಎಂದು ವ್ಯಾಖ್ಯಾನಿಸಿದರು.

'ಅವರೊಬ್ಬ ಸುಳ್ಳುಗಾರ. ತಾವು ಎಂದೂ ನಂಬದ ಗಾಂಧಿ ಹೆಸರಿನಲ್ಲಿ ದೇಶದ ಕಸ ಗುಡಿಸಲು ಮುಂದಾಗಿದ್ದಾರೆ. ಗಾಂಧಿ ಹುಟ್ಟಿದ ನಾಡಿನಲ್ಲಿ ಮಾರಣಹೋಮ ನಡೆಸಿ ಆ ಮುಖಾಂತರ ದೇಶದಲ್ಲಿ ಭಯ ನಿರ್ಮಿಸಿ ಈಗ ಭದ್ರತೆ ಕೊಡುತ್ತೇನೆ ಎನ್ನುತ್ತಿದ್ದಾರೆ' ಎಂದು ಹೇಳಿದರು.

'ಒಬ್ಬ ನಿಜವಾದ ಹಿಂದೂಗೆ ಇರಬೇಕಾದ ಮಾದರಿ ಎಂದರೆ ಗಾಂಧಿ ಮಾದರಿ. ಮೋಸಕ್ಕೆ, ಕಪಟಕ್ಕೆ ಅಲ್ಲಿ ಜಾಗವಿಲ್ಲ. ಅವರವರ ಧರ್ಮಾಚರಣೆಗಳನ್ನು ಮಾಡುವಂತೆ ಪ್ರೋತ್ಸಾಹಿಸುವುದರಲ್ಲಿ ಅವರೀಗ ವಿಪರೀತ ಸಂತೋಷವಿತ್ತು. ಕಡಿಮೆ ಸುಳ್ಳು ಹೇಳಿರುವ ಆತ್ಮಕಥೆ ಎಂದರೆ ಗಾಂಧೀಜಿ ಅವರ ನನ್ನ ಸತ್ಯಾನ್ವೇಷಣೆ' ಎಂದು ವಿಶ್ಲೇಷಿಸಿದರು.

ಪುಸ್ತಕದ ಬಗ್ಗೆ ಮಾತನಾಡಿದ ಲೇಖಕ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, 'ರಾಜ್ಯದಲ್ಲಿ ಗಾಂಧಿ ಅಲೆ ಸೃಷ್ಟಿಸಿದವರು ಹನುಮಂತಪ್ಪ. ಗಾಂಧೀಜಿ ವಿಚಾರಗಳ ಮೂಲಕ ಸಾಮಾಜಿಕ ಬದಲಾವಣೆಗೆ ಕಾರಣರಾದರು. ಆಧ್ಯಾತ್ಮಿಕ ಜಗತ್ತನ್ನು ಅರಳಿಸುವ ಕೆಲಸ ಮಾಡಿದರು. ಬದುಕಿನುದ್ದಕ್ಕೂ ಹೋರಾಟದಲ್ಲಿ ತೊಡಗಿಸಿಕೊಂಡು ಯುವಕರಲ್ಲಿ ಹೊಸ ಕನಸು ತುಂಬಿದರು' ಎಂದರು. ಪ್ರತಿಷ್ಠಾನದ ಅಧ್ಯಕ್ಷ ವೂಡೇ.ಪಿ.ಕೃಷ್ಣ ಇದ್ದರು.




'ಡಬ್ಲ್ಯು.ಎಚ್.ಹನುಮಂತಪ್ಪ ಹೋರಾಟದ ಹೆಜ್ಜೆಗಳು' ಕೃತಿಯನ್ನು ಬಿಡುಗಡೆಗೊಳಿಸಿದ ಕನ್ನಡ ಪುಸ್ತಕ ಪ್ರಾಧಿಕಾರ ಅಧ್ಯಕ್ಷ ಡಾ.ಬಂಜಗೆರೆ ಜಯಪ್ರಕಾಶ್, ಪುಸ್ತಕವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ.ಶ್ರೀನಿವಾಸಯ್ಯ ಅವರಿಗೆ ನೀಡಿದರು. ದತ್ತಿದಾನಿಗಳ ಪ್ರತಿನಿಧಿ ಡಬ್ಲ್ಯು.ಎಚ್.ದೇವಕುಮಾರ್, ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಹಾಗೂ ಕೃತಿಯ ಲೇಖಕ ಎಂ.ಎಚ್.ನಾಗರಾಜ್ ಚಿತ್ರದಲ್ಲಿದ್ದಾರೆ —ಪ್ರಜಾವಾಣಿ ಚಿತ್ರ





ಹಿರಿಯೂರಿನ ಗುರುಭವನದಲ್ಲಿ ಬುಧವಾರ ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ, ಪ್ರೊ.ಬಿ.ಆರ್.ರಾಮಚಂದ್ರೇಗೌಡ ಟ್ರಸ್ಟ್ ಹಾಗೂ ತಾಲ್ಲೂಕು ಪಿಯು ಕಾಲೇಜುಗಳ ಆಶ್ರಯದಲ್ಲಿ ಹಮ್ಮಿಕೊಂಡಿದ್ದ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ' ಕಾರ್ಯಕ್ರಮವನ್ನು ರಾಮಚಂದ್ರೇಗೌಡ ಟ್ರಸ್ಟ್‌ನ ಟ್ರಸ್ಟಿ ಹೊನ್ನಮ್ಮ ಉದ್ಘಾಟಿಸಿದರು (ಎಡಚಿತ್ರ). ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದ ವಿದ್ಯಾರ್ಥಿ ಸಮೂಹ.

## 'ಯುವಕರಿಗೆ ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧೀಜಿ ಸಂದೇಶ' ಕಾರ್ಯಾಗಾರ

# 'ಗಾಂಧೀಜಿ, ವಿವೇಕಾನಂದರ ಆದರ್ಶ ಪಾಲಿಸಿ'

ಪ್ರಜಾವಾಣಿ ವಾರ್ತೆ 25/12/2014

ಹಿರಿಯೂರು: ಗಾಂಧಿ ಎಂದರೆ ಸೋನಿಯಾ, ಪ್ರಿಯಾಂಕಾ, ರಾಹುಲ್, ಪೂಜಾಗಾಂಧಿ ಎಂದು ಉತ್ತರಿಸುವ ಯುವ ಪೀಳಿಗೆಗೆ ದೇಶವನ್ನು ಬ್ರಿಟಿಷರ ದಾಸ್ಯದಿಂದ ಮುಕ್ತಗೊಳಿಸಿದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯೇ ನಿಜವಾದ ಗಾಂಧಿ ಎನ್ನುವುದನ್ನು ಪರಿಚಯ ಮಾಡಿಸಬೇಕಿದೆ ಎಂದು ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಕರೆ ನೀಡಿದರು.

ನಗರದ ಗುರುಭವನದಲ್ಲಿ ಬುಧವಾರ ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ, ಪ್ರೊ.ಬಿ.ಆರ್.ರಾಮಚಂದ್ರೇಗೌಡ ಟ್ರಸ್ಟ್ ಹಾಗೂ ತಾಲ್ಲೂಕು ಪಿಯು ಕಾಲೇಜುಗಳ ಆಶ್ರಯದಲ್ಲಿ ಹಮ್ಮಿಕೊಂಡಿದ್ದ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ' ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಪ್ರಸ್ತುತ ದೇಶವನ್ನು ನಾವೇ ಆಳುತ್ತಿದ್ದರೂ ಸಂಸ್ಕೃತಿ ಬ್ರಿಟಿಷರದ್ದು. ವಿದ್ಯಾಭ್ಯಾಸದ ಬದಲು ಅಕ್ಷರಭ್ಯಾಸ ಮಾಡಿಸಲಾಗುತ್ತಿದೆ. ನಮ್ಮ ಶಿಕ್ಷಣ ವ್ಯವಸ್ಥೆ ನಾವು ಹೇಗೆ ಬದುಕಬೇಕೆಂದು ಕಲಿಸುತ್ತಿಲ್ಲ. ಭೂಮಿ, ತಾಯಿ, ಗುರು, ಅತಿಥಿ, ಆಚಾರ್ಯ ಎಂದರೆ ತಿಳಿದೇ ಇಲ್ಲ. ಸಿನಿಮಾ ನಟರು, ಕ್ರಿಕೆಟ್ ಆಟಗಾರರನ್ನು ಆದರ್ಶವಾಗಿಟ್ಟುಕೊಳ್ಳುವ ಬದಲು ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧೀಜಿ ಅವರನ್ನು ಆದರ್ಶವಾಗಿಟ್ಟುಕೊಳ್ಳುವ ಬಗ್ಗೆ ಯುವ ಪೀಳಿಗೆಗೆ ಅರಿವು ಮೂಡಿಸಬೇಕು ಎಂದು ಅವರು ಹೇಳಿದರು.

ಸಮಾರಂಭದ ನೇತೃತ್ವ ವಹಿಸಿ ಮಾತನಾಡಿದ ತುಮಕೂರಿನ ರಾಮಕೃಷ್ಣ–ವಿವೇಕಾನಂದ ಆಶ್ರಮದ ವೀರೇಶಾನಂದ ಸರಸ್ವತಿ ಸ್ವಾಮೀಜಿ ಮಾತನಾಡಿ, ಪೂರ್ವ–ಪಶ್ಚಿಮ ರಾಷ್ಟ್ರಗಳಲ್ಲಿನ ಅಂತರವನ್ನು ಕಡಿಮೆ ಮಾಡಿದ ಕೀರ್ತಿ ವಿವೇಕಾನಂದರಿಗೆ ಸಲ್ಲುತ್ತದೆ. ಗಾಂಧಿಯವರಲ್ಲಿ ರಾಷ್ಟ್ರಭಕ್ತಿಯ ಸ್ಫೂರ್ತಿಗೆ ಅವರೇ ಕಾರಣ. ಸುಭಾಶ್‌ಚಂದ್ರ ಬೋಸ್, ಅರವಿಂದ್ ಘೋಷ್, ಡಾ.ರಾಧಾಕೃಷ್ಣನ್, ಜಗದೀಶ ಚಂದ್ರಬೋಸ್, ಬಾಲಗಂಗಾಧರ ತಿಲಕರು ಸೇರಿದಂತೆ ನೂರಾರು ಪ್ರಮುಖರು ವಿವೇಕಾನಂದರ ಚಿಂತನೆಯಲ್ಲಿ ಮೂಡಿಬಂದವರು. ರಾಜ–ಮಹಾರಾಜರ ಆತಿಥ್ಯ ಸ್ವೀಕರಿಸುತ್ತಿದ್ದ ವಿವೇಕರು ಜಾಡಮಾಲಿಯ ಮನೆಯಲ್ಲೂ ಮಲಗಿದ್ದರು. ವಿವೇಕಾನಂದರನ್ನು ರಾಜಗುರು ಎಂದು ಸ್ವೀಕರಿಸಿದ್ದ ಟಾಟಾ ಕುಟುಂಬ, ಅವರ ಸೂಚನೆಯ ಮೇರೆಗೆ ಬೆಂಗಳೂರಿನಲ್ಲಿ ತನ್ನ ಸಂಸ್ಥೆ ಆರಂಭಿಸಿತು ಎಂದು ವಿವರಿಸಿದರು.

ಪದವಿಪೂರ್ವ ಶಿಕ್ಷಣ ಇಲಾಖೆ ನಿರ್ದೇಶಕಿ ಸುಷ್ಮಾ ಗೋಡಬೋಲೆ ಮಾತನಾಡಿ, ಪಿಯು ಶಿಕ್ಷಣ ವಿದ್ಯಾರ್ಥಿ ಬದುಕಿನ ಪ್ರಮುಖ ಘಟ್ಟ. ಭವಿಷ್ಯದ ಬಗೆಗಿನ ಗುರಿ ನಿರ್ದಿಷ್ಟವಾಗಿರಲಿ. ಮನಸ್ಸನ್ನು ನಿಯಂತ್ರಣದಲ್ಲಿ ಇಟ್ಟುಕೊಂಡು, ಏಕಾಗ್ರತೆಯಿಂದ ಓದಿದಲ್ಲಿ ಉನ್ನತ ಸಾಧನೆ ಸಾಧ್ಯ. ಆತ್ಮ ವಿಶ್ವಾಸವಿಲ್ಲದೆ ಸುಖ ಪಡೆಲಾಗದು. ಚಾರಿತ್ರ್ಯವಿಲ್ಲದ ಜ್ಞಾನದಿಂದ ಪ್ರಯೋಜನವಿಲ್ಲ ಎಂದು ತಿಳಿಸಿದರು.

ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ವಿವೇಕಾನಂದರು ಭಾರತದ ರಾಷ್ಟ್ರೀಯತೆಗೆ ಪಿತಾಮಹರಾಗಿದ್ದರೆ, ರಾಜಕೀಯದಲ್ಲಿ ಆಧ್ಯಾತ್ಮವನ್ನು ಅಳವಡಿಸಿದ ಮಹಾನ್ ನೇತಾರ ಮಹಾತ್ಮ ಗಾಂಧೀಜಿ. ಗಾಂಧೀಜಿಯ ನಂತರ ಇಡೀ ದೇಶ ಒಪ್ಪುವಂತಹ ನಾಯಕ ಬಾರದಿರುವುದು ದೊಡ್ಡ ಕೊರತೆ ಎಂದು ಹೇಳಿದರು.

ಕಾರ್ಯಕ್ರಮವನ್ನು ರಾಮಚಂದ್ರೇಗೌಡ ಟ್ರಸ್ಟ್‌ನ ಟ್ರಸ್ಟಿ ಹೊನ್ನಮ್ಮ ಉದ್ಘಾಟಿಸಿದರು. ಶಾರದಾಶ್ರಮದ ಮಾತಾ ಚೈತನ್ಯಮಯಿ, ಅಧ್ಯಕ್ಷತೆ ವಹಿಸಿದ್ದ ಶಾಸಕ ಡಿ. ಸುಧಾಕರ್, ಬಳ್ಳಾರಿಯ ಪೊಲೀಸ್ ಅಧೀಕ್ಷಕ ಶಶಿಕುಮಾರ್, ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ರಂಗಸ್ವಾಮಯ್ಯ ಮಾತನಾಡಿದರು. ಪ್ರೊ.ರಾಮಚಂದ್ರಗೌಡರ ಪತ್ನಿ ಹೊನ್ನಮ್ಮ, ಪುತ್ರಿ ಡಾ.ಬಿ.ಆರ್.ಮಮತಾ, ಪಿಯು ಇಲಾಖೆ ಉಪ ನಿರ್ದೇಶಕ ಕೆ.ಎನ್.ರಂಗನಾಥ್, ಬಿ.ಎಲ್.ಗೌಡ, ಕೆ.ಎನ್.ಶಿವಮಾದಯ್ಯ, ಡಿ.ಕೆ.ಕೋದಂಡರಾಮ, ಡಾ. ಶಿವಲಿಂಗಪ್ಪ, ಜಿ.ಕೆ.ಚಂದ್ರಶೇಖರ್, ಜಬೀವುಲ್ಲಾ, ರವಿಚಂದ್ರ, ಪ್ರೇಮ್ ಕುಮಾರ್, ಶಿವಣ್ಣ, ಅಬ್ಬಾಸ್, ರತ್ನಮ್ಮ, ದಾದಾಪೀರ್, ಜೆ. ಹೊನ್ನಯ್ಯ ಮತ್ತಿತರರು ಉಪಸ್ಥಿತರಿದ್ದರು.

ಎಚ್.ಬಿ.ದಿನೇಶ್ ಸ್ವಾಗತಿಸಿದರು. ಪ್ರೊ.ಜೆ.ಬಿ.ಶಿವರಾಜು ಕಾರ್ಯಕ್ರಮ ನಿರೂಪಿಸಿದರು. ಟಿ.ಎನ್.ವೆಂಕಟೇಶ್ ವಂದಿಸಿದರು.

ವಿಜಯ ಕರ್ನಾಟಕ

### ವಿವೇಕಾನಂದ, ಗಾಂಧಿ 19, 20ನೇ ಶತಮಾನದ ಅದ್ಭುತಗಳು

# ಮಾನವೀಯ ಗುಣ ಇಂದಿನ ಶಿಕ್ಷಣದ ಅಗತ್ಯ

ವಿಕ ಚಿತ್ರಲೋಕ





ಹಿರಿಯೂರಿನ ಗುರುಭವನದಲ್ಲಿ ದತ್ತಿ ಕಾರ್ಯಕ್ರಮದ ಅಂಗವಾಗಿ ಬುಧವಾರ ಆಯೋಜಿಸಿದ್ದ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ' ಕುರಿತ ಉಪನ್ಯಾಸದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ ಮಾತನಾಡಿದರು. ಕಾರ್ಯಕ್ರಮದಲ್ಲಿ ತಾಲೂಕಿನ ನಾನಾ ಪಿಯು ಕಾಲೇಜುಗಳ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಪಾಲ್ಗೊಂಡಿದ್ದರು(ಬಲ ಚಿತ್ರ).

■ **ವಿಕ ಸುದ್ದಿಲೋಕ** ಹಿರಿಯೂರು

ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ 19, 20ನೇ ಶತಮಾನದ ಅದ್ಭುತಗಳು. ವಿವೇಕಾನಂದ ಆಧ್ಯಾತ್ಮ ಮುಖಂಡ, ದೇಶದ ಶಕ್ತಿ ಆಧ್ಯಾತ್ಮಿಕತೆಯಲ್ಲಿ ಅಡಗಿದೆ ಎಂದು ನಂಬಿದ್ದರು. ಗಾಂಧೀಜಿಯವರದ್ದು ರಚನಾತ್ಮಕ ನಾಯಕತ್ವ, ಆಧ್ಯಾತ್ಮವನ್ನೇ ಸ್ವಾತಂತ್ರ್ಯ ಚಳವಳಿಗೆ ದಾಳವಾಗಿ ಬಳಸಿಕೊಂಡರು ಎಂದು ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ.ಪಿ.ಕೃಷ್ಣ ಹೇಳಿದರು.

ನಗರದ ಗುರುಭವನದಲ್ಲಿ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಪ್ರೊ.ರಾಮಚಂದ್ರೇಗೌಡ ಟ್ರಸ್ಟ್, ತಾಲೂಕು ಪಿಯು ಕಾಲೇಜುಗಳ ಆಶ್ರಯದಲ್ಲಿ ಬುಧವಾರ ಆಯೋಜಿಸಿದ್ದ 'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ' ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದರು.

ಮಾನವೀಯ ಗುಣ ಬಿತ್ತುವ ಶಿಕ್ಷಣ ಇಂದಿನ ಅಗತ್ಯವಾಗಿದೆ ಎಂದು ಸ್ವಾಮೀಜಿ ತಿಳಿಸಿದರೆ, ಮನಸ್ಸು ಅರಳಿಸುವ, ಹೃದಯ ಕಲಕುವ ಹಾಗೂ ಕೈಗೆ ಕೆಲಸ ನೀಡುವ ಶಿಕ್ಷಣಬೇಕೆಂದು ಗಾಂಧಿ ಸಾರಿದರು. ಗಾಂಧಿಯನ್ನು ಅಂದು ಇಡೀ ದೇಶವೇ ಒಪ್ಪುತ್ತಿತ್ತು. ದುರಂತದ ಸಂಗತಿ ಎಂದರೆ ಇಂದು 120 ಕೋಟಿ ಜನರ ಪೈಕಿ ಎಲ್ಲರಿಗೂ ಸಮ್ಮತಿಯಾಗುವ ಒಬ್ಬನೇ ಒಬ್ಬ ನೇತಾರ ಇಲ್ಲ. ದೇಶ ಅನಾಯಕತ್ವದಿಂದ ಬಳಲುತ್ತಿದೆ ಎಂದು ವಿಷಾದಿಸಿದರು.

## ಸಂದೇಶ ಆಲಿಸಿದ ಮಕ್ಕಳು

'ಯುವಕರಿಗೆ ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧೀಜಿ ಸಂದೇಶ' ಉಪನ್ಯಾಸ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ನೂರಾರು ವಿದ್ಯಾರ್ಥಿಗಳಿಗೆ ಮಹತ್ತರ ಸಂದೇಶ ತಲುಪಿಸುವಲ್ಲಿ ಸಂಘಟನೆಗಳು ಸಫಲವಾದವು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಹಾಗೂ ತುಮಕೂರು ರಾಮಕೃಷ್ಣ ಆಶ್ರಮದ ಅಧ್ಯಕ್ಷ ಡಾ.ವೀರೇಶಾನಂದ ಸರಸ್ವತಿ ಸ್ವಾಮೀಜಿಯವರ ಆಧ್ಯಾತ್ಮಿಕ ಮಾತುಗಳ ಸೆಳೆತಕ್ಕೆ ಸತತ ಮೂರು ಗಂಟೆಗಳ ಕಾಲ ತದೇಕ ಚಿತ್ತದಿಂದ ವಿದ್ಯಾರ್ಥಿಗಳು ಭಾಷಣ ಆಲಿಸಿದ್ದು, ಕಾರ್ಯಕ್ರಮದ ಸಫಲತೆ ಎತ್ತಿಹಿಡಿಯಿತು. ಕಾರ್ಯಕ್ರಮದಲ್ಲಿ ಧರ್ಮಪುರ, ಹರಿಯಬ್ಬೆ, ದೇವರಕೊಟ್ಟ, ಅಂಬೇಡ್ಕರ್, ಪಟ್ಟಣದ ಬಾಲಕ ಮತ್ತು ಬಾಲಕಿಯರ ಕಾಲೇಜು, ಯಳನಾಡು ಗ್ರಾಮಗಳಿಂದ ನೂರಾರು ಸಂಖ್ಯೆ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಪಾಲ್ಗೊಂಡಿದ್ದರು.

ದರಿದ್ರರಲ್ಲಿ, ಮೂರ್ಖರಲ್ಲಿ, ಪಾಪಿಗಳಲ್ಲಿ ಭಗವಂತನನ್ನು ಕಾಣಲು ಯತ್ನಿಸಿದ ವಿವೇಕಾನಂದ 'ನಾನು ಸಂಕ್ಷೇಪಿತ ಭಾರತ' ಎಂದು ಖಚಿತವಾಗಿ ಹೇಳುತ್ತಿದ್ದರು. ಸ್ವಾಮೀಜಿ ಹಾಗೂ ಗಾಂಧೀಜಿ ಸಂಘಟನೆಯಲ್ಲಿ ವಿಶ್ವಾಸವಿರಿಸಿಕೊಂಡಿದ್ದರು. ಮಾನವೀಯ ಧರ್ಮಸಾರುವ ಹಿಂದೂ ಧರ್ಮಕ್ಕಿಂತ ಮಿಗಿಲಾದ ಧರ್ಮ ಮತ್ತೊಂದಿಲ್ಲ ಎಂಬುದು ವಿವೇಕಾನಂದರ ಅಭಿಪ್ರಾಯವಾಗಿತ್ತು ಎಂದು ತಿಳಿಸಿದರು.

ಶಾರದಾಶ್ರಮದ ಮಾತಾಚೈತನ್ಯಮಯಿ ಮಾತನಾಡಿ,

**ಕ್ಯಾಂಪಸ್**

ಯುವಕ, ಯುವತಿಯರ ಮನಸ್ಸಿನಲ್ಲಿ ಅಶ್ಲೀಲ ಭಾವನೆ ಮೂಡಲು ಬಿಡಬಾರದು. ಕಾರ್ಯಕ್ರಮಗಳ ಮೂಲಕ ದುರ್ನಡತೆ ಕಳೆಯಲು ಸಾಧ್ಯವಿಲ್ಲ, ಬದಲಾಗಿ ಮನಸ್ಸು ಪರಿವರ್ತನೆಯಾಗಬೇಕಿದೆ ಎಂದರು.

ಶಾಸಕ ಡಿ.ಸುಧಾಕರ್, ರಾಮಕೃಷ್ಣಾಶ್ರಮದ ಡಾ. ವೀರೇಶಾನಂದ ಸರಸ್ವತಿ ಸ್ವಾಮೀಜಿ, ಪಿಯು ಶಿಕ್ಷಣ ಇಲಾಖೆ ನಿರ್ದೇಶಕಿ ಸುಷ್ಮಾ ಗೋಡಬೋಲೆ, ಪಿಯು ಡಿಸಿ ಕೆ.ಎನ್. ರಂಗನಾಥ್, ಪೊಲೀಸ್ ಅಧೀಕ್ಷಕ ಶಶಿಕುಮಾರ್, ಟ್ರಸ್ಟಿ ಹೊನ್ನಮ್ಮ, ರಂಗಶಾಮಯ್ಯ, ಪ್ರೊ.ಶಿವರಾಜು, ಜಬೀವುಲ್ಲಾ, ಉಪಾಧ್ಯಕ್ಷ ರವಿಚಂದ್ರ, ಎಚ್.ಬಿ. ದಿನೇಶ್, ಶಿವಮಾದಯ್ಯ, ಪ್ರಾಂಶುಪಾಲರಾದ ಚಂದ್ರಶೇಖರ್; ಡಾ.ಸಿ.ಶಿವಲಿಂಗಪ್ಪ ಉಪಸ್ಥಿತರಿದ್ದರು.

ತಾಲೂಕಿನ ಸುಮಾರು ಹತ್ತು ಕಾಲೇಜುಗಳ ಒಂದು ಸಾವಿರಕ್ಕೂ ಅಧಿಕ ವಿದ್ಯಾರ್ಥಿಗಳು ಸಭೆಯಲ್ಲಿ ಭಾಗವಹಿಸಿದ್ದರು.

# ವೈವಿಧ್ಯ ವಿಶೇಷ

ವಿಜಯವಾಣಿ
ಭಾನುವಾರ, 7 ಡಿಸೆಂಬರ್ 2014




## ವೃತ್ತಿ ಉತ್ಸವದಲ್ಲಿ ಲೇಖಕ [illegible] ಕಿವಿಮಾತು

ಸಾಮಾಜಿಕ ಜಾಲ ತಾಣಗಳಿಗೆ ಹೆಚ್ಚಿನ ಸಮಯ ಮೀಸಲಿಡುವುದರ ಬದಲು ನಿಮ್ಮ ಭವಿಷ್ಯದ ಗುರಿ ಮುಟ್ಟುವ ಕಡೆಗೆ ಹೆಚ್ಚಿನ ಸಮಯ ನೀಡಿ ಎಂದು ಲೇಖಕ ಚೇತನ್ ಭಗತ್ ಹೇಳಿದರು.

ಫ್ಯೂಯೆಲ್ ಮೀಡಿಯಾ ಸಲ್ಯೂಷನ್ಸ್ ಸಂಸ್ಥೆ ಶನಿವಾರ ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ಆಯೋಜಿಸಿದ್ದ 'ವೃತ್ತಿ ಉತ್ಸವ'ಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ನಾವು ಓದುವ ಕಾಲದಲ್ಲಿ ಸಾಮಾಜಿಕ ಜಾಲ ತಾಣಗಳಿರಲಿಲ್ಲ. ಆದರೆ, ಇಂದು ಪ್ರತಿಯೊಬ್ಬರ ಮೊಬೈಲ್‌ನಲ್ಲೂ ಫೇಸ್‌ಬುಕ್, ಟ್ವೀಟರ್ ಮುಂತಾದ ಸಾಮಾಜಿಕ ಜಾಲ ತಾಣಗಳಿರುವುದರಿಂದ ವಿದ್ಯಾರ್ಥಿಗಳು ತಮ್ಮ ಮುಂದಿನ ಭವಿಷ್ಯದ ಬಗ್ಗೆ ಹೆಚ್ಚು ಗಮನ ಹರಿಸದೆ, ಲೈಕ್ ಮತ್ತು ಕಮೆಂಟ್ ಬಗ್ಗೆಯೇ ಆಲೋಚಿಸುತ್ತಿದ್ದಾರೆ. ಇದರಿಂದ ಭವಿಷ್ಯ ಗುರಿ ತಲುಪಲು ಸಾಧ್ಯವಾಗುವುದಿಲ್ಲ. ಹಾಗಾಗಿ ವಿದ್ಯಾರ್ಥಿಗಳು ತಮ್ಮ ಗುರಿ ತಲುಪುವ ಕಡೆಗೆ ಹೆಚ್ಚು ಗಮನಹರಿಸುವುದು ಸೂಕ್ತ ಎಂದರು.

ನೀವು ಆಯ್ಕೆ ಮಾಡಿಕೊಳ್ಳುವ ದಾರಿ ಅಥವಾ ವೃತ್ತಿಯನ್ನು ನಿಮ್ಮ ಸಂಗಾತಿ ಎಂದು ಭಾವಿಸಬೇಕು. ಇಲ್ಲವಾದರೆ ಪರಿಪೂರ್ಣ ಮನಸ್ಸಿನಿಂದ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಐಷಾರಾಮಿ ಜೀವನದಿಂದ ಹೊರನಡೆದು ನಿಮ್ಮ ವ್ಯಕ್ತಿತ್ವ ರೂಪಿಸಿಕೊಳ್ಳಲು ಕಾರ್ಯಪ್ರವೃತ್ತರಾಗಬೇಕು. ನಾನು ಜನರಿಗೆ ಮನರಂಜನೆ ನೀಡುವ ಉದ್ದೇಶದಿಂದ ಪುಸ್ತಕ ಬರೆಯುತ್ತೇನೆ. ನನ್ನ ಪ್ರಕಾರ ಮನರಂಜನೆಯಿಂದಲೇ ಜನರನ್ನು ಗೆಲ್ಲಲು ಸಾಧ್ಯ. ನನ್ನ ಪುಸ್ತಕಗಳು ಸಾಕಷ್ಟು ಬಾರಿ ಮರುಮುದ್ರಣಗೊಂಡಿರುವುದು ಇದಕ್ಕೆ ಸಾಕ್ಷಿ ಎಂದರು.

ಫ್ಯೂಯೆಲ್ ಮೀಡಿಯಾ ಸಲ್ಯೂಷನ್ಸ್ ಸಂಸ್ಥೆಯ ಸಂಸ್ಥಾಪಕ ಪ್ರದೀಪ್ ನಾಯ್ಕ್ ಮಾತನಾಡಿ, ಈ ಉತ್ಸವ ನಡೆಸುತ್ತಿರುವುದು ಹೆಮ್ಮೆಯ ಸಂಗತಿ. ಇದು ಮೂರನೇ ಆವೃತ್ತಿಯ ಉತ್ಸವವಾಗಿದ್ದು, ಸಾವಿರಾರು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸಿರುವುದಕ್ಕೆ ಹೆಚ್ಚು ಖುಷಿಯಾಗಿದೆ. ಪಾಲಕರ ಆಸೆಗಳಿಗೆ ಬೆಲೆ ನೀಡಿ ಇಷ್ಟವಿಲ್ಲದ ವೃತ್ತಿ ಆಯ್ಕೆ ಮಾಡಿಕೊಳ್ಳಲು ಮುಂದಾಗುವ ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ ನೀಡಲು ಈ ಉತ್ಸವ ಸಹಾಯ ಮಾಡುತ್ತದೆ ಎಂದರು.

ಈ ಸಂಜೆ
ಶುಕ್ರವಾರ, 5-12-2014




ದಿ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಂಸ್ಥೆ ಏರ್ಪಡಿಸಿದ್ದ ಗಣಿ ಇಂಜಿನಿಯರ್‌ಗಳ 26ನೆ ರಾಷ್ಟ್ರೀಯ ಸಮಾವೇಶ ಮತ್ತು ಪ್ರಸಕ್ತ ಆರ್ಥಿಕ ಸನ್ನಿವೇಶದಲ್ಲಿ ಸುರಕ್ಷಿತ ಹಾಗೂ ಸುಸ್ಥಿತ ಗಣಿಗಾರಿಕೆ ಕುರಿತ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಸಂಸ್ಥೆ ಅಧ್ಯಕ್ಷ ಡಾ. ಎಲ್.ವಿ.ಮುರಳಿಕೃಷ್ಣ ರೆಡ್ಡಿ ಉದ್ಘಾಟಿಸಿದರು. ಮುಖಂಡರಾದ ಪ್ರೊಡೆ.ಪಿ.ಕೃಷ್ಣ, ಡಿ.ವಿ.ಪಿಚಮುತ್ತು, ಚಂದ್ರಮೋಹನ್ ಮತ್ತಿತರರು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ

25 । ನವೆಂಬರ್ । 2014



ಶೇಷಾದ್ರಿಪುರಂ ಸಂಜೆ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭವನ್ನು ಡಾ. ಬೈರೆಮಂಗಲ ರಾಮೇಗೌಡ ಉದ್ಘಾಟಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ನಿರ್ದೇಶಕ ಡಾ. ಎಂ.ಪ್ರಕಾಶ್, ಧರ್ಮದರ್ಶಿ ಪರಮಶಿವಯ್ಯ ಹಾಗೂ ಪ್ರಾಂಶುಪಾಲರಾದ ಪ್ರೊ. ಮಹಾಲಕ್ಷ್ಮಿ ಮತ್ತಿತರರಿದ್ದರು.

# ಈ ಸಂಜೆ

ಸೋಮವಾರ, 24-11-2014




ಶೇಷಾದ್ರಿಪುರಂ ಸಂಜೆ ಪದವಿಪೂರ್ವ ಕಾಲೇಜಿನಲ್ಲಿ ನಡೆದ ಕನ್ನಡ ರಾಜ್ಯೋತ್ಸವದಲ್ಲಿ ಡಾ. ಬೈರಮಂಗಲ ರಾಮೇಗೌಡ, ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಡಾ. ವೂಡೇ ಪಿ.ಕೃಷ್ಣ, ಡಾ. ಎಂ. ಪ್ರಕಾಶ್, ಪರಮಶಿವಯ್ಯ, ಪ್ರಾಂಶುಪಾಲ ಪ್ರೊ. ಮಹಾಲಕ್ಷ್ಮಿ ಉಪಸ್ಥಿತರಿದ್ದರು.

ವಿಜಯವಾಣಿ 2014 ಭಾನುವಾರ 16 ನವೆಂಬರ್ 3

# ವಿಜ್ಞಾನಿಗಳ ಪರಾವಲಂಬನೆ ತಪ್ಪಲಿ

ವಿಜ್ಞಾನಿಗಳು ಪ್ರತಿ ತಂತ್ರಜ್ಞಾನಕ್ಕೂ ಹೊರದೇಶಗಳ ಮೇಲೆ ಅವಲಂಬಿತರಾಗುತ್ತಿರುವುದರಿಂದ ಸಂಶೋಧನೆ ಹಾಗೂ ಉತ್ಪಾದನಾ ಕ್ಷೇತ್ರದಲ್ಲಿ ಸಾಕಷ್ಟು ಹಿಂದುಳಿದಿದ್ದೇವೆ ಎಂದು ಇಸ್ರೋ ಮಾಜಿ ಅಧ್ಯಕ್ಷ ಪ್ರೊ. ಯು.ಆರ್. ರಾವ್ ಬೇಸರ ವ್ಯಕ್ತಪಡಿಸಿದ್ದಾರೆ.

ಭಾರತೀಯ ಇಂಜಿನಿಯರ್‌ಗಳ ಸಂಸ್ಥೆಯ ಏರೋಸ್ಪೇಸ್ ಇಂಜಿನಿಯರಿಂಗ್ ವಿಭಾಗ ಏರ್ಪಡಿಸಿದ್ದ 'ಮುಂದಿನ ದಶಕಗಳಲ್ಲಿ ಏರೋಸ್ಪೇಸ್ ತಂತ್ರಜ್ಞಾನ' ಕುರಿತ ರಾಷ್ಟ್ರೀಯ ಸಮಾವೇಶ ಉದ್ಘಾಟಿಸಿ ಮಾತನಾಡಿದರು.

ಭಾರತದಲ್ಲಿ ಸಂಶೋಧನೆ ಹಾಗೂ ಉತ್ಪಾದನಾ ಕ್ಷೇತ್ರಗಳಿಗೆ ಅಗತ್ಯವಿರುವ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲವಿದ್ದರೂ ಪ್ರತಿ ಯಂತ್ರ ಹಾಗೂ ಅದರ ಬಿಡಿಭಾಗಗಳನ್ನು ಆಮದು ಮಾಡಿಕೊಂಡು ಜೋಡಣೆ ಮಾಡಲಾಗುತ್ತಿದೆ. ಅದಕ್ಕೆ ಸಂಶೋಧನೆ ಎಂಬ ಹೆಸರು ನೀಡಲಾಗುತ್ತಿದೆ. ಆದರೆ, ಸಂಶೋಧನೆಗೆ ಅಗತ್ಯವಿರುವ ಬಿಡಿಭಾಗಗಳನ್ನೂ ಸ್ವತಃ ಸಂಶೋಧಿಸಿ ತಯಾರಿಸುವುದನ್ನು ವಿಜ್ಞಾನಿಗಳು ರೂಢಿಸಿಕೊಳ್ಳಬೇಕು ಎಂದರು.




ಏರೋಸ್ಪೇಸ್ ತಂತ್ರಜ್ಞಾನ ಕುರಿತ ರಾಷ್ಟ್ರೀಯ ಸಮಾವೇಶದಲ್ಲಿ ಡಾ. ಕೆ. ಶಿವನ್, ಪಿ. ಶ್ರೀಕುಮಾರ್, ಎಸ್. ರಂಗರಾಜನ್, ಡಾ. ಹೇಮೇಂದ್ರ ಆರ್ಯ ಅವರಿಗೆ ಇಸ್ರೋ ಮಾಜಿ ಅಧ್ಯಕ್ಷ ಪ್ರೊ. ಯು.ಆರ್. ರಾವ್ ಉತ್ತಮ ಇಂಜಿನಿಯರ್ ಪ್ರಶಸ್ತಿ ನೀಡಿದರು.

## ಖಾಸಗಿ ಸಂಸ್ಥೆಗಳ ನೆರವು ಅಗತ್ಯ

ರಕ್ಷಣಾ ಸಂಶೋಧನೆ ಹಾಗೂ ಅಭಿವೃದ್ಧಿ ಸಂಸ್ಥೆಯ (ಡಿಆರ್‌ಡಿಒ) ಏರೋನಾಟಿಕ್ಸ್ ಮಹಾನಿರ್ದೇಶಕ ಡಾ. ಕೆ. ತಮಿಳ್‌ಮಣಿ ಮಾತನಾಡಿ, ಭದ್ರತೆ ದೃಷ್ಟಿಯಿಂದ ರಕ್ಷಣಾ ಇಲಾಖೆ ಸಂಶೋಧನೆಯಲ್ಲಿ ಖಾಸಗಿ ಸಹಭಾಗಿತ್ವಕ್ಕೆ ಕೇಂದ್ರ ಸರ್ಕಾರ ಮಹತ್ವ ನೀಡುತ್ತಿಲ್ಲ. ಇದರಿಂದ ಏರ್ ಕ್ರ್ಯಾಫ್ಟ್ ತಯಾರಿಕೆಯಲ್ಲಿ ನಾವಿನ್ನೂ ಸ್ವಾವಲಂಬನೆ ಸಾಧಿಸಿಲ್ಲ. ಪ್ರತಿಯೊಂದಕ್ಕೂ ವಿದೇಶಿ ತಂತ್ರಜ್ಞಾನದ ಮೇಲೆ ಅವಲಂಬಿತವಾಗಿರುವುದರಿಂದ ಲಕ್ಷಾಂತರ ಕೋಟಿ ರೂ. ನಷ್ಟ ಅನುಭವಿಸುತ್ತಿದ್ದೇವೆ. ಖಾಸಗಿ ಸಹಭಾಗಿತ್ವಕ್ಕೆ ಮಹತ್ವ ನೀಡುವುದರಿಂದ ವಿಮಾನ, ಹೆಲಿಕಾಪ್ಟರ್‌ಗಳ ಪರಿಶೀಲನೆ, ಬಿಡಿಭಾಗಗಳ ಜೋಡಣೆ ಕಾರ್ಯ ಸುಲಭವಾಗುತ್ತದೆ. ಇದರಿಂದ ಭದ್ರತೆಗೆ ಧಕ್ಕೆ ಬರುವುದಿಲ್ಲ ಎಂದರು.

### ಮಂಗಳಯಾನ ಅಗತ್ಯ

ಕೆಲವರು ಮಂಗಳಯಾನ ಅಗತ್ಯವೇನಿದೆ ಎಂದು ಲೇವಡಿ ಮಾಡುತ್ತಿದ್ದಾರೆ. ಆದರೆ, ಮುಂದಿನ 200 ವರ್ಷಗಳ ನಂತರ ಜಾಗತಿಕ ಮಟ್ಟದಲ್ಲಿ ನೈಸರ್ಗಿಕ ಸಂಪನ್ಮೂಲ ಖಾಲಿಯಾದಾಗ ಮಂಗಳದಂಥ ಗ್ರಹಗಳಲ್ಲಿನ ಸಂಪನ್ಮೂಲಗಳೇ ನೆರವಿಗೆ ಬರಲಿವೆ ಎಂದರು.

ವಾಯುಸೇನೆಯಿಂದ 800 ಹೆಲಿಕಾಪ್ಟರ್‌ಗಳ ಬೇಡಿಕೆಯಿದೆ. ಆದರೆ, ಎಚ್‌ಎಎಲ್ ಪ್ರತಿವರ್ಷ ಕೇವಲ 65 ಹೆಲಿಕಾಪ್ಟರ್ ನಿರ್ಮಿಸುತ್ತಿದೆ. ಹೀಗೆ ಮುಂದುವರಿದಲ್ಲಿ ಅವರ ಬೇಡಿಕೆ ಪೂರೈಸುವುದು ಕಷ್ಟಸಾಧ್ಯ. ಆದ್ದರಿಂದ ಖಾಸಗಿ ಸಂಸ್ಥೆಗಳ ನೆರವು ಪಡೆಯಬೇಕು ಎಂದರು.

ಡಾ. ಕೆ. ಶಿವನ್, ಪಿ. ಶ್ರೀಕುಮಾರ್, ಎಸ್. ರಂಗರಾಜನ್, ಡಾ. ಹೇಮೇಂದ್ರ ಆರ್ಯ ಅವರಿಗೆ ಉತ್ತಮ ಇಂಜಿನಿಯರ್ ಪ್ರಶಸ್ತಿ ನೀಡಲಾಯಿತು. ಡಾ. ವಿ. ಸೆಂಥಿಲ್‌ಕುಮಾರ್, ವಿವೇಕ್ ದಾದು, ಡಾ. ಅಶೋಕ್ ಡೆ ಅವರನ್ನು ಸನ್ಮಾನಿಸಲಾಯಿತು.

ಭಾರತೀಯ ಇಂಜಿನಿಯರ್ಸ್ ಸಂಸ್ಥೆ ಅಧ್ಯಕ್ಷ ಡಾ. ಎಲ್.ವಿ. ಮಲ್ಲಿಕಾರ್ಜುನ ರೆಡ್ಡಿ, ಏರೋಸ್ಪೇಸ್ ಇಂಜಿನಿಯರಿಂಗ್ ಡಿವಿಜನ್ ಬೋರ್ಡ್ ಅಧ್ಯಕ್ಷ ಪ್ರೊ. ಆರ್.ಎಂ. ವಾಸಗಂ, ಡಾ. ಪೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ ಬೆಂಗಳೂರು

ಶನಿವಾರ | ನವೆಂಬರ್ | 15 | 2014

# ಹೆಲಿಕಾಪ್ಟರ್ ಬೇಡಿಕೆ 800; ಎಚ್‌ಎಎಲ್ ಸಾಮರ್ಥ್ಯ 65!

ಬೆಂಗಳೂರು: ವಿಜ್ಞಾನಿಗಳು ಸಂಶೋಧನೆಗೆ ಅಗತ್ಯವಿರುವ ಪ್ರತಿಯೊಂದು ತಂತ್ರಜ್ಞಾನಕ್ಕೂ ಪರದೇಶಗಳ ಮೇಲೆ ಅವಲಂಬನೆಯಾಗುವುದನ್ನು ಬಿಡಬೇಕು. ಅಗತ್ಯ ತಂತ್ರಜ್ಞಾನವನ್ನೆಲ್ಲಾ ಸ್ವತಃ ಅಭಿವೃದ್ಧಿಪಡಿಸಿದಾಗ ಮಾತ್ರ ಅವರು ಶ್ರೇಷ್ಠ ವಿಜ್ಞಾನಿಯಾಗಲು, ದೇಶ ಅಭಿವೃದ್ಧಿ ಹೊಂದಲು ಸಾಧ್ಯ ಎಂದು ಇಸ್ರೋ ಮಾಜಿ ಅಧ್ಯಕ್ಷ ಪ್ರೊ.ಯು.ಆರ್. ರಾವ್ ಅಭಿಪ್ರಾಯಪಟ್ಟಿದ್ದಾರೆ.

ಭಾರತೀಯ ಇಂಜಿನಿಯರ್‌ಗಳ ಸಂಸ್ಥೆಯ ಏರೋಸ್ಪೇಸ್ ಇಂಜಿನಿಯರಿಂಗ್ ವಿಭಾಗದಿಂದ ಶುಕ್ರವಾರ ಏರ್ಪಡಿಸಿದ್ದ 'ಮುಂದಿನ ದಶಕಗಳಲ್ಲಿ ಏರೋಸ್ಪೇಸ್ ತಂತ್ರಜ್ಞಾನ' ವಿಷಯ ಕುರಿತ ರಾಷ್ಟ್ರೀಯ ಸಮಾವೇಶವನ್ನು ಅವರನ್ನು ಉದ್ಘಾಟಿಸಿದರು.

ಭಾರತದಲ್ಲಿ ನೈಸರ್ಗಿಕ ಸಂಪನ್ಮೂಲ, ಮಾನವ ಸಂಪನ್ಮೂಲ ಹಾಗೂ ಸಾಮರ್ಥ್ಯ ಇದ್ದರೂ ವಿದೇಶಗಳಿಂದ ಆಮದು ಮಾಡಿಕೊಳ್ಳುವ ಪ್ರಮಾಣ ಕಡಿಮೆಯಾಗಿಲ್ಲ. ವಿಜ್ಞಾನಿಗಳೂ ಕೂಡ ಪ್ರತಿಯೊಂದು ಯಂತ್ರ ಹಾಗೂ ಬಿಡಿಭಾಗಗಳನ್ನೂ ಆಮದು ಮಾಡಿಕೊಂಡು ಜೋಡಣೆ ಮಾಡಿ ಅದನ್ನು ಸಂಶೋಧನೆ ಎನ್ನುತ್ತಿದ್ದಾರೆ. ವಾಸ್ತವವಾಗಿ ತಮ್ಮ ಸಂಶೋಧನೆಗೆ ಅಗತ್ಯವಿರುವ ಎಲ್ಲಾ ಬಿಡಿಭಾಗಗಳ ಹಾಗೂ ತಂತ್ರಜ್ಞಾನವನ್ನೂ ತಾವೇ ಸಂಶೋಧನೆ ಮಾಡಬೇಕು. ಅಂತಹ ಗುಣಗಳನ್ನು ದೇಶದ ವಿಜ್ಞಾನಿಗಳು ರೂಢಿಸಿಕೊಳ್ಳಬೇಕು ಎಂದರು.




ಭಾರತೀಯ ಇಂಜಿನಿಯರ್‌ಗಳ ಸಂಸ್ಥೆಯ ಏರೋಸ್ಪೇಸ್ ಇಂಜಿನಿಯರಿಂಗ್ ವಿಭಾಗ ಶುಕ್ರವಾರ ಏರ್ಪಡಿಸಿದ್ದ ರಾಷ್ಟ್ರೀಯ ಸಮಾವೇಶವನ್ನು ಪ್ರೊ. ಯು.ಆರ್.ರಾವ್ ಉದ್ಘಾಟಿಸಿದರು. ಡಾ. ಕೆ. ತಮಿಳ್‌ಮಣಿ, ಮತ್ತಿತರರು ಇದ್ದರು.

ಡಿಆರ್‌ಡಿಒ ಏರೋನಾಟಿಕ್ಸ್ ಮಹಾನಿರ್ದೇಶಕ ಡಾ. ಕೆ ತಮಿಳ್‌ಮಣಿ, ಕೇಂದ್ರ ಸರ್ಕಾರವು ರಕ್ಷಣಾ ಇಲಾಖೆಯ ಸಂಶೋಧನೆಗೆ ಬಂಡವಾಳ ಹೂಡುತ್ತಿಲ್ಲ ಹಾಗೂ ಖಾಸಗಿ ಸಹಭಾಗಿತ್ವಕ್ಕೆ ಆದ್ಯತೆ ನೀಡುತ್ತಿಲ್ಲ. ಇದರಿಂದ ಜಾಗತಿಕ ಮಟ್ಟದಲ್ಲಿ ನಮ್ಮ ಗುಣಮಟ್ಟ ಹಾಗೂ ಉತ್ಪಾದನೆ ಪ್ರಮಾಣ ಕುಸಿದಿದೆ. ಏರ್‌ಕ್ರ್ಯಾಫ್ಟ್ ತಯಾರಿಕೆಯಲ್ಲಿ ಕೂಡ ನಾವಿನ್ನೂ ಸ್ವಾವಲಂಬನೆ ಸಾಧಿಸಲು ಸಾಧ್ಯವಾಗಿಲ್ಲ. ಪ್ರತಿಯೊಂದಕ್ಕೂ ಒಂದಲ್ಲಾ ಒಂದು ರೀತಿಯಲ್ಲಿ ವಿದೇಶಿ ಆಮದಿನ ಮೇಲೆ ಅವಲಂಬನೆಯಾಗಿ ಲಕ್ಷಾಂತರ ಕೋಟಿ ರೂ. ನಷ್ಟ ಅನುಭವಿಸುತ್ತಿದ್ದೇವೆ ಎಂದು ಹೇಳಿದರು.

ದೇಶದಲ್ಲಿ ಪ್ರತಿ ವರ್ಷ 800 ಹೆಲಿಕಾಪ್ಟರ್ ಬೇಡಿಕೆ ಇದೆ. ಆದರೆ, ಎಚ್‌ಎಎಲ್ ಪ್ರತಿ ವರ್ಷ 65 ಹೆಲಿಕಾಪ್ಟರ್ ನಿರ್ಮಿಸುವ ಸಾಮರ್ಥ್ಯ ಮಾತ್ರ ಹೊಂದಿದೆ. ಅದೇ ಬೋಯಿಂಗ್‌ನಂತಹ ವಿಮಾನ ತಯಾರಿಕಾ ಕಂಪನಿಗಳು ಖಾಸಗಿ ಜಂಟಿ ಸಹಭಾಗಿತ್ವದಲ್ಲಿ ಪ್ರತಿ ದಿನ 2 ವಿಮಾನ ತಯಾರಿಸುತ್ತಿವೆ. ಇದರಂತೆ ದೇಶದಲ್ಲೂ ಖಾಸಗಿ ಸಹಭಾಗಿತ್ವದಲ್ಲಿ ಉತ್ಪಾದನೆಗೆ ಆದ್ಯತೆ ನೀಡಬೇಕು ಎಂದು ಹೇಳಿದರು.

**■ ಬಂಡವಾಳ ಹೂಡಿಕೆ ಬೇಕು:** ಚೀನಾ ದೇಶವು ಪ್ರತಿ ವರ್ಷ 40 ಬಿಲಿಯನ್ ಡಾಲರ್ ಹಣವನ್ನು ರಕ್ಷಣಾ ಇಲಾಖೆಗಾಗಿ ಮೀಸಲಿಡುತ್ತಿದೆ. ಆದರೆ, ದೇಶದಲ್ಲಿ ಮಾತ್ರ ಕೇವಲ 0.5 ಬಿಲಿಯನ್ ಡಾಲರ್ ಹಣ ಹೂಡಲಾಗುತ್ತಿದೆ. ಈ ಹಣದಿಂದ ಯಶಸ್ಸು ಗಳಿಸಲು ಸಾಧ್ಯವಿಲ್ಲ. ವಿಎಲ್‌ಎಚ್ ಹೆಲಿಕಾಪ್ಟರ್ ಇಂಜಿನ್ ಆಮದಿಗೆ ಮುಂದಿನ ದಿನಗಳಲ್ಲಿ ದೇಶವು 4.55 ಲಕ್ಷ ಕೋಟಿ ರೂ. ಹಣ ವ್ಯಯಿಸಬೇಕಾಗುತ್ತದೆ. ಇದರ ಬದಲಿಗೆ ನಮ್ಮಲ್ಲೇ ಬಂಡವಾಳ ಹೂಡಿದರೆ ಇಂಜಿನ್‌ನ್ನು ತಯಾರಿಸಿ ಬೇರೆ ದೇಶಗಳಿಗೆ ಮಾರುವ ಸಾಮರ್ಥ್ಯ ನಮಗಿದೆ. ಹಾಲಿ ಸರ್ಕಾರ ಈ ನಿಟ್ಟಿನಲ್ಲಿ ಉತ್ತಮ ಸಹಕಾರ ನೀಡಲಿದೆ ಎಂದು ಭಾವಿಸಿದ್ದೇನೆ ಎಂದು ಹೇಳಿದರು.

ಡಾ.ಕೆ. ಶಿವನ್, ಪಿ. ಶ್ರೀಕುಮಾರ್, ಎಸ್. ರಂಗರಾಜನ್, ಡಾ. ಹೇಮೇಂದ್ರ ಆರ್ಯ ಅವರಿಗೆ ಉತ್ತಮ ಇಂಜಿನಿಯರ್ ಪ್ರಶಸ್ತಿ ಹಾಗೂ ಡಾ.ವಿ. ಸೆಂಥಿಲ್‌ಕುಮಾರ್, ವಿವೇಕ್ ದಾದು, ಡಾ. ಅಶೋಕ್ ಡೆ ಅವರಿಗೆ ಉತ್ತಮ ಇಂಜಿನಿಯರ್ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಭಾರತೀಯ ಇಂಜಿನಿಯರ್ಸ್ ಸಂಸ್ಥೆ ಅಧ್ಯಕ್ಷ ಡಾ. ಎಲ್.ವಿ.ಮಲ್ಲಿಕಾರ್ಜುನ ರೆಡ್ಡಿ, ಪ್ರೊ. ಆರ್.ಎಂ. ವಾಸಗಂ, ಡಾ. ವೂಡೇ ಪಿ. ಕೃಷ್ಣ ಮತ್ತಿತರರು ಹಾಜರಿದ್ದರು.

ಕರ್ನಾಟಕ

ಶನಿವಾರ,15 ನವೆಂಬರ್ 2014

## ವಿಜ್ಞಾನಿ ಡಾ.ಯು.ಆರ್.ರಾವ್ ಸಲಹೆ

# ಅಂತರಿಕ್ಷ ವಲಯದಲ್ಲಿ ಆಮದು ತಗ್ಗಿಸಿ

▪ **ವಿಕ ಸುದ್ದಿಲೋಕ** ಬೆಂಗಳೂರು

ಭಾರತೀಯ ಸೇನೆ ಹಾಗೂ ವಾಣಿಜ್ಯ ವಿಮಾನಯಾನ ವಲಯದಲ್ಲಿ ಅಗತ್ಯವಿರುವ ಎಲ್ಲ ಸಾಮಗ್ರಿಗಳ ಆಮದು ಪ್ರಮಾಣವನ್ನು ಕಡಿಮೆ ಮಾಡುವತ್ತ ಚಿಂತನೆ ನಡೆಸಬೇಕು ಎಂದು ಇಸ್ರೊ ಸಂಸ್ಥೆಯ ಮಾಜಿ ಅಧ್ಯಕ್ಷ ಹಾಗೂ ಪದ್ಮಭೂಷಣ ಪುರಸ್ಕೃತ ಡಾ.ಯು.ಆರ್.ರಾವ್ ಸಲಹೆ ನೀಡಿದರು.

'ಭವಿಷ್ಯದಲ್ಲಿ ಭಾರತೀಯ ಅಂತರಿಕ್ಷ ಯಾನ ತಂತ್ರಜ್ಞಾನಗಳ ಅನ್ವೇಷಣೆ ಹಾಗೂ ಮಾರ್ಗಗಳು' ಕುರಿತು ಬಾಹ್ಯಾಕಾಶದ ಎಂಜಿನಿಯರಿಂಗ್ ವಿಭಾಗೀಯ ಮಂಡಳಿ ಸಹಯೋಗದಲ್ಲಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್‌ನ ಕರ್ನಾಟಕ ಶಾಖೆಯು ಆಯೋಜಿಸಿದ್ದ 2 ದಿನಗಳ 28ನೇ ರಾಷ್ಟ್ರೀಯ ಸಮ್ಮೇಳನದಲ್ಲಿ ಡಾ.ವಿಕ್ರಂ ಸಾರಾಭಾಯಿ ಸ್ಮಾರಕ ಉಪನ್ಯಾಸ ನೀಡಿ ಅವರು ಮಾತನಾಡಿದರು.

''ನಾಗರಿಕ ವಿಮಾನಯಾನ ಹಾಗೂ ಸೇನಾ ವಲಯದಲ್ಲಿ ಸ್ವಾವಲಂಬನೆ ಸಾಧಿಸಲು ನಿರ್ವಹಣೆ, ದುರಸ್ತಿ ಸೇರಿದಂತೆ ಇತರೆ ವಲಯದಲ್ಲಿ ಅಗತ್ಯವಿರುವ ಎಲ್ಲ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳಲು ಅತಿ ಹೆಚ್ಚಿನ ಹಣ ವ್ಯಯವಾಗುತ್ತಿದೆ. ವಿದೇಶಿಯರು ತಯಾರಿಸಿದ ಯಂತ್ರಗಳ ಬಿಡಿ ಭಾಗಗಳನ್ನು ಆಮದು ಮಾಡಿಕೊಂಡು ವಿಮಾನಗಳನ್ನು ತಯಾರಿಸುವ ಅಗತ್ಯ ಈಗಿಲ್ಲ. ಆದ್ದರಿಂದ, ಬಾಹ್ಯಾಕಾಶಕ್ಕೆ ಸಂಬಂಧಿಸಿದ ಯಾವುದೇ ಸಾಮಗ್ರಿ ತಯಾರಿಕೆಗೆ ಸ್ಥಳೀಯವಾಗಿಯೇ ಅನುಕೂಲಗಳನ್ನು ಸೃಷ್ಟಿಸಿಕೊಳ್ಳಬೇಕಿದೆ,'' ಎಂದು ಅಭಿಪ್ರಾಯಪಟ್ಟರು.




ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಸಂಸ್ಥೆಯಲ್ಲಿ ಶುಕ್ರವಾರ ಆರಂಭಗೊಂಡ ರಾಷ್ಟ್ರೀಯ ಸಮ್ಮೇಳನದಲ್ಲಿ ಡಾ. ಎಲ್.ವಿ. ಮುರಳಿಕೃಷ್ಣ ರೆಡ್ಡಿ, ಇಸ್ರೊ ಮಾಜಿ ಅಧ್ಯಕ್ಷ ಡಾ.ಯು.ಆರ್. ರಾವ್, ಡಾ. ವೂಡಿ ಪಿ. ಕೃಷ್ಣ ಸಮಾಲೋಚನೆ ನಡೆಸಿದರು.

ರಕ್ಷಣೆ ಸಂಶೋಧನೆ ಹಾಗೂ ಅಭಿವೃದ್ಧಿ ಸಂಸ್ಥೆಯ (ಡಿಆರ್‌ಡಿಓ) ಬಾಹ್ಯಾಕಾಶ ವಿಭಾಗದ ಪ್ರಧಾನ ನಿರ್ದೇಶಕ. ಡಾ.ಕೆ. ತಮಿಳ್‌ಮಣಿ ಮಾತನಾಡಿ ''ಖಾಸಗಿ ಕಂಪನಿಗಳ ಸಹಭಾಗಿತ್ವದಲ್ಲಿ ಭಾರತೀಯ ವಿಮಾನಯಾನ ವಲಯದ ಅಭಿವೃದ್ಧಿಗೆ ಕೇಂದ್ರ ಸರಕಾರ ಹೆಚ್ಚಿನ ನೆರವು ನೀಡಬೇಕು. ಆಗ ಮಾತ್ರ, ವಿಮಾನಯಾನದ ಸಂಶೋಧನೆ, ಅಭಿವೃದ್ಧಿ, ತಯಾರಿಕೆ, ಬಿಡಿ ಭಾಗಗಳ ಜೋಡಣೆ, ಪರೀಕ್ಷೆ, ಮಾರಾಟ, ಗುತ್ತಿಗೆ ಇತ್ಯಾದಿ ವಲಯಗಳು ಬಲಗೊಳ್ಳಲಿವೆ,'' ಎಂದರು.

ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಅಧ್ಯಕ್ಷ ಡಾ.ಎಲ್.ವಿ. ಮುರಳಿಕೃಷ್ಣ ರೆಡ್ಡಿ ಸಮ್ಮೇಳನ ಉದ್ಘಾಟಿಸಿದರು. ಅಂತರಿಕ್ಷಯಾನ ಎಂಜಿನಿಯರಿಂಗ್ ವಿಭಾಗೀಯ ಮಂಡಳಿ ಅಧ್ಯಕ್ಷ ಪ್ರೊ. ಆರ್.ಎಂ. ವಾಸಗಂ ಅಧ್ಯಕ್ಷತೆ ವಹಿಸಿದ್ದರು. ಡಾ.ವೂಡಿ ಪಿ.ಕೃಷ್ಣ, ಡಾ.ಪಿ.ವಿಜಯಕುಮಾರ್, ಡಾ.ಎಸ್.ಪಾರ್ಥನ್ ಸೇರಿದಂತೆ ಅಂತರಿಕ್ಷಯಾನ ವಲಯದ ವಿಜ್ಞಾನಿಗಳು, ಉದ್ಯಮಿದಾರರು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು.

**ಸನ್ಮಾನ:** ಅಂತರಿಕ್ಷ ಉದ್ಯಮ ಬೆಳವಣಿಗೆಯಲ್ಲಿ ಸಾಧನೆ ತೋರಿದ ಹಿರಿಯ ವಿಜ್ಞಾನಿಗಳಾದ ಡಾ. ಶಿವನ್, ಪಿ.ಶ್ರೀಕುಮಾರ್, ಡಾ.ರಂಗರಾಜನ್, ಡಾ.ಹೇಮೇಂದ್ರ ಆರ್ಯ ಹಾಗೂ ಕಿರಿಯ ವಿಜ್ಞಾನಿಗಳಾದ ಡಾ.ವಿ. ಸೆಂಥಿಲ್‌ಕುಮಾರ್, ಡಾ. ವಿವೇಕ ದಾದು ಹಾಗೂ ಡಾ.ಅಶೋಕ್ ದೇ ಅವರನ್ನು ಇದೇ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ಈ ಸಂಜೆ

ಶುಕ್ರವಾರ 14 ನವೆಂಬರ್, 2014



ನಗರದ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಭಾಂಗಣದಲ್ಲಿ ವೈಮಾನಿಕ ಇಂಜಿನಿಯರಿಂಗ್ ವಿಭಾಗ ಮಂಡಳಿ ವತಿಯಿಂದ ಹಮ್ಮಿಕೊಂಡಿದ್ದ 28ನೇ ರಾಷ್ಟ್ರೀಯ ಸಮಾವೇಶವನ್ನು ಇಸ್ರೋ ಮಾಜಿ ಅಧ್ಯಕ್ಷ ಪದ್ಮಭೂಷಣ ಡಾ. ಯು. ಆರ್. ರಾವ್ ಉದ್ಘಾಟಿಸಿದರು. ಮಂಡಳಿಯ ಅಧ್ಯಕ್ಷ ಪದ್ಮಶ್ರೀ ಪ್ರೊ. ಆರ್.ಎಂ. ವಾಸಗಂ, ಡಿಆರ್‌ಡಿಒ ಪ್ರಧಾನ ನಿರ್ದೇಶಕ (ವೈಮಾನಿಕ) ಡಾ. ಕೆ. ತಮಿಳ್ ಮಣಿ, ಜಿಐಐನ ಡಾ. ಎಲ್. ಬಿ. ಮುರಳಿ ಕೃಷ್ಣ ರೆಡ್ಡಿ ಮತ್ತಿತರರು ಪಾಲ್ಗೊಂಡಿದ್ದರು.

ಸಂಜೆವಾಣಿ

7 ಮಂಗಳವಾರ 11 ನವಂಬರ್ 2014



ಇತ್ತೀಚೆಗೆ ನಡೆದ ತುಮಕೂರಿನ ಗಾಂಧಿ ಮೂಲಿ ಮರಿಯಪ್ಪ ಸ್ಮರಣೆ ಕಾರ್ಯಕ್ರಮದಲ್ಲಿ ಸಮಾಜ ಚಿಂತಕ ಕೆ.ಪಿ. ಜಯಸಿಂಹ ಅವರನ್ನು ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಡಾ. ವೂಡೆ ಪಿ. ಕೃಷ್ಣ, ಪಿ. ತಿಮ್ಮಯ್ಯ, ಹೆಬ್ಬಗೋಡಿ ಗೋಪಾಲ್, ರು. ಬಸಪ್ಪ, ರಾಣಿ ಗೋವಿಂದರಾಜು ಮತ್ತಿತರರು ಉಪಸ್ಥಿತರಿದ್ದಾರೆ.

ಸಂಜೆವಾಣಿ ಮಂಗಳವಾರ 11 ನವಂಬರ್ 2014



ಇತ್ತೀಚೆಗೆ ನಡೆದ ತುಮಕೂರಿನ ಗಾಂಧಿ ಮಾಲಿ ಮರಿಯಪ್ಪ ಸ್ಮರಣೆ ಕಾರ್ಯಕ್ರಮದಲ್ಲಿ ಸಮಾಜ ಚಿಂತಕ ಕೆ.ಪಿ. ಜಯಸಿಂಹ ಅವರನ್ನು ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಡಾ. ಪೂಡೆ ಪಿ. ಕೃಷ್ಣ, ಪಿ. ತಿಮ್ಮಯ್ಯ, ಹೆಬ್ಬಗೋಡಿ ಗೋಪಾಲ್, ರು. ಬಸಪ್ಪ, ರಾಣಿ ಗೋವಿಂದರಾಜು ಮತ್ತಿತರರು ಉಪಸ್ಥಿತರಿದ್ದಾರೆ.

ನಮ್ಮ ರಾಜ್ಯಪ್ರಗತಿ ನವೆಂಬರ್ 10, 2014

## ಮಾಲಿ ಮರಿಯಪ್ಪನವರ ಕಾಲದ ರಾಜಕಾರಣಿಗಳು ಪ್ರಾಮಾಣಿಕ ಕಾಳಜಿಯ ಜನಪರ ಮುಂದಾಳುಗಳಾಗಿದ್ದರು

-ಡಾ. ವೂಡೆ ಪಿ.ಕೃಷ್ಣ

"ಸಮಾಜ ಬದಲಾದಂತೆ ಮೌಲ್ಯಗಳು ಬದಲಾಗುತ್ತಿವೆಯೇ ಹೊರತು ಕುಸಿಯುತ್ತಿಲ್ಲ. ಮಾಲಿ ಮರಿಯಪ್ಪ ಮತ್ತವರ ಕಾಲದ ರಾಜಕಾರಣಿಗಳು ಈಗಿನ ರಾಜಕಾರಣಿಗಳಂತಲ್ಲದೆ, ಜನಪರ ಕಾಳಜಿಯ ಪ್ರಾಮಾಣಿಕ ಮುಂದಾಳುಗಳಾಗಿದ್ದರು. ಜನರ ಕಷ್ಟ ಸುಖಗಳು ತಮ್ಮದೆಂದು ಭಾವಿಸಿದ್ದರು. ತುಮಕೂರಿನ ಗಾಂಧೀಜಿ ಎಂದೇ ಖ್ಯಾತರಾಗಿದ್ದ ಮಾಲಿಮರಿಯಪ್ಪ ಸಾರ್ವಜನಿಕ ಬದುಕಿನ ದಿಗ್ಗಜರಾಗಿದ್ದರು. ಜನಸೇವೆಯೇ ಜನಾರ್ದನ ಸೇವೆ ಎಂದು ನಂಬಿದ್ದ ನಾಯಕರಿದ್ದಂತಹ ಪರ್ವಕಾಲ ಅದು. ಗಾಂಧೀಜಿ ಅನುಯಾಯಿಗಳಾಗಿ, ಬದುಕಿನಲ್ಲಿ ಬಹಳ ಕಷ್ಟ ನಷ್ಟ ಅನುಭವಿಸಿದರೂ ಈ ನಾಯಕರೆಂದೂ ನೊಂದುಕೊಳ್ಳುತ್ತಿರಲಿಲ್ಲ. ತಮ್ಮ ಉದಾತ್ತ ವಿಚಾರವಂತಿಕೆಯಿಂದ, ಮಾಡಿ ಹೋಗಿರುವ ಅಪಾರ ಜನಸೇವಾ ಕಾರ್ಯಗಳಿಂದಾಗಿ ನಮ್ಮೆಲ್ಲರ ಹೃದಯಗಳಲ್ಲಿ ಇಂದಿಗೂ ಮಾಲಿಮರಿಯಪ್ಪನವರು ಉಳಿದಿದ್ದಾರೆ" ಎಂದು ಶಿಕ್ಷಣ ತಜ್ಞ, ಶೇಷಾದ್ರಿಪುರ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ ಅಭಿಪ್ರಾಯ ಪಟ್ಟರು.

ಇತ್ತೀಚೆಗೆ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಮಾಲಿಮರಿಯಪ್ಪ ಅಭಿಮಾನಿ ಬಳಗ ಮಾಲಿಮರಿಯಪ್ಪನವರ ಸ್ಮರಣೆಗಾಗಿ ಏರ್ಪಡಿಸಿದ್ದ "ಕುಸಿಯುತ್ತಿರುವ ಮೌಲ್ಯಗಳು" ವಿಚಾರ ಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ವಿಚಾರ ಸಂಕಿರಣದಲ್ಲಿ ತಮ್ಮ ವಿಚಾರ ಮಂಡಿಸಿದ ಕವಯತ್ರಿ ರಾಣಿ ಗೋವಿಂದರಾಜು "ಹಳೆಯ ಮೈಸೂರು ಭಾಗದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಎಲ್ಲಾ ಮಜಲುಗಳಲ್ಲೂ ಭಾಗವಹಿಸಿ, ಅನೇಕಬಾರಿ ಸೆರೆ ಮನೆ ವಾಸ ಅನುಭವಿಸಿದ ಮಾಲಿಮರಿಯಪ್ಪ ರೈತರ, ಕಡು ಬಡವರ ಅಭ್ಯುದಯಕ್ಕಾಗಿ ಕೊನೆಯುಸಿರಿನವರೆಗೂ ಶ್ರಮಿಸಿದರು. ತುಮಕೂರು ಜಿಲ್ಲೆಯಾದ್ಯಂತ ಶಾಲೆ, ಕಾಲೇಜು, ಆಸ್ಪತ್ರೆ, ಸಮುದಾಯ ಭವನಗಳ ಸ್ಥಾಪನೆಗೆ ನಾಂದಿ ಹಾಡಿದ ಇವರು ಶಾಸಕರಾಗಿ, ಮಂತ್ರಿಯಾಗಿ, ಲೋಕಸಭಾ ಸದಸ್ಯರಾಗಿ ಅನೇಕ ವರ್ಷಗಳ ಕಾಲ ಅಧಿಕಾರ ರಾಜಕಾರಣದಲ್ಲಿದ್ದರೂ ಹಣ ಮಾಡಲಿಲ್ಲ. ಮಂತ್ರಿಯಾಗಿದ್ದಾಗಲೇ ನಡೆದ ತಮ್ಮ ದ್ವತೀಯ ಪುತ್ರಿಯ ವಿವಾಹಕ್ಕಾಗಿ ಸಾಲ ಮಾಡಿದ್ದರು ಎಂದರೆ ಅವರ ವ್ಯಕ್ತಿತ್ವ ಅರ್ಥವಾಗುತ್ತದೆ" ಎಂದು ಹೇಳಿದರು.

ಹಿರಿಯ ಸಮಾಜ ಚಿಂತಕ ಎಂ. ತಿಮ್ಮಯ್ಯ ವಿಚಾರ ಸಂಕಿರಣದಲ್ಲಿ ಮಾತನಾಡುತ್ತಾ, "ಈಗಿನ ಶಾಸಕರು, ಕಾರ್ಪೊರೇಟರುಗಳು ತಾವು ಚುನಾವಣೆಗೆ ಖರ್ಚು ಮಾಡಿದ ೧೦ರಷ್ಟು ೨೦ರಷ್ಟನ್ನು ಬಾಚಿಕೊಳ್ಳುವುದರಲ್ಲೇ ನಿರತರಾಗಿರುತ್ತಾರೆ. ಇಂತಹವರ ನಡುವೆ ಮಾಲಿ ಮರಿಯಪ್ಪ ಅಂತಹವರು ತೀರಾ ವಿಭಿನ್ನರಾಗಿ ಕಾಣುತ್ತಾರೆ. ಇಂತಹ ಮಹಾತ್ಮರ ಸ್ಮರಣೆ ಕಾರ್ಯಕ್ರಮಗಳು ಎಲ್ಲಾ ಶಾಲೆ, ಕಾಲೇಜುಗಳಲ್ಲಿ ಆಗಬೇಕು. ಆಗ ಗಾಂಧಿ ಟೋಪಿ ಎಂದರೆ ಜನ ಗೌರವದಿಂದ ನೋಡುತ್ತಿದ್ದರು, ಈಗ ಟೋಪಿಧಾರಿಗಳನ್ನು ಕಂಡರೆ ಅಪಹಾಸ್ಯ ಮಾಡುತ್ತಾರೆ. ಮಾಲಿ ಮರಿಯಪ್ಪ, ಟಿ. ಸಿದ್ದಲಿಂಗಯ್ಯ, ಸೈಕಲ್‌ನಲ್ಲೇ ಹೋಗಿ ಜನರ ಕೆಲಸ ಮಾಡಿಕೊಡುತ್ತಿದ್ದ ಟಿ.ಆರ್.ಶಾಮಣ್ಣ, ಅಪ್ಪಟ ಪ್ರಾಮಾಣಿಕ ಶಾಂತವೇರಿ ಗೋಪಾಲಗೌಡ ಇಂತಹವರು ನಮಗೆ ಆದರ್ಶರಾಗಬೇಕು" ಎಂದು ಕರೆ ನೀಡಿದರು.

ಸಭೆಯಲ್ಲಿ ಅಭಿನಂದನೆಗೆ ಪಾತ್ರರಾದ, ವಕೀಲಿವೃತ್ತಿಯಲ್ಲೂ ಮೌಲ್ಯಗಳಿವೆ, ಆದರ್ಶಗಳಿವೆ ಎಂದು ತೋರಿಸಿಕೊಟ್ಟಿರುವ ಕೆ.ಪಿ.ಜಯಸಿಂಹ ಮಾತನಾಡಿ, "ಮಾಲಿ ಮರಿಯಪ್ಪನವರು ತುಮಕೂರಿಗೆ ಮಾತ್ರವಲ್ಲ, ಇಡೀ ಕರ್ನಾಟಕಕ್ಕೆ ಗಾಂಧಿ ಆಗಿದ್ದರು. ಇಂದು ಎಲ್ಲವೂ ವಾಣಿಜ್ಯೀಕರಣಗೊಂಡಿರುವಾಗ, ತ್ಯಾಗ, ಪ್ರೀತಿ, ವಿಶ್ವಾಸಗಳಿಗೆ ಮೌಲ್ಯ ತಂದುಕೊಟ್ಟ ಮಾಲಿ ಮರಿಯಪ್ಪ ಅಂತಹವರು ನಮಗೆ ಪ್ರಾತಃಸ್ಮರಣೀಯರಾಗಿ ಕಾಣುತ್ತಾರೆ" ಎಂದು ಹೇಳಿದರು..

ಕೆ.ಪಿ.ಜಯಸಿಂಹ ಅವರ ಸಹೋದ್ಯೋಗಿ ವಕೀಲರಾದ ಅಂಬಿಕ ನಗರದ ಅನೇಕ ಕೊಳಚೆ ಪ್ರದೇಶಗಳಲ್ಲಿನ ನಿವಾಸಿಗಳಿಗೆ ಕಾನೂನಿನ ಅರಿವು ನೆರವು ಕಾರ್ಯಕ್ರಮಗಳನ್ನು ಆಗಿಂದಾಗ ರೂಪಿಸುತ್ತಿರುವ ಜಯಸಿಂಹ ಅವರನ್ನು ಹಾರ್ದಿಕವಾಗಿ ಅಭಿನಂದಿಸಿದರು.

ಅಧ್ಯಕ್ಷತೆ ವಹಿಸಿದ್ದ ಹಿರಿಯ ಸಂಘಟಕ, ಚಿಂತಕ, ಲೇಖಕ ಹೆಬ್ಬಗೋಡಿ ಗೋಪಾಲ್ "ಮಾಲಿ ಮರಿಯಪ್ಪ, ಕನಕಪುರದ ಗಾಂಧಿ ಎನಿಸಿಕೊಂಡಿದ್ದ ಎಸ್.ಕರಿಯಪ್ಪ ಮೊದಲಾದವರೆಲ್ಲರೂ ಇಡೀ ಸಮಾಜಕ್ಕಾಗಿ, ದೇಶಕ್ಕಾಗಿ ಬದುಕಿದರು. ಇವರು ಎಂದೋ ನಿಧನರಾಗಿದ್ದರೂ ಇಂದೂ ನೆನಪಿಸಿಕೊಳ್ಳುತ್ತೇವೆ ಎಂದರೆ ಅವರು ಎಂತಹ ಉನ್ನತ ವ್ಯಕ್ತಿಗಳು ಎಂಬುದು ಅರ್ಥವಾಗುತ್ತದೆ. ಅವರ ಆದರ್ಶಗಳನ್ನು ನಾವೂ ಮೈಗೂಡಿಸಿಕೊಳ್ಳೋಣ" ಎಂದು ಕರೆ ನೀಡಿದರು.

ಎಂ.ಆರ್. ಅನಂತಮೂರ್ತಿ, ಎಸ್.ಜಿ. ಮಾಲತಿ ಶೆಟ್ಟಿ, ಎಸ್.ಎಸ್. ಪಡಶೆಟ್ಟಿ, ಕೆ.ವಿ. ಶಂಕರನಾರಾಯಣ ದೇಶಭಕ್ತಿಗೀತೆಗಳನ್ನು ಹಾಡಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು ಸಮಾರಂಭದಲ್ಲಿ ಕೆಂಪಾಜನೇಯ, ರಂಗನಾಥ್, ಮಂಜುನಾಥ್ ಮತ್ತು ಮಿತ್ರರು ವೈಯಕ್ತಿಕವಾಗಿ ಜಯಸಿಂಹ ಅವರನ್ನು ಗೌರವಿಸಿದರು.

ಬೆಂಗಳೂರು ಉದಯವಾಣಿ
ಸೋಮವಾರ | ನವೆಂಬರ್ | 10 | 2014

## ಮಿನಿ ಸುದ್ದಿ

### ■ ಏರೋಸ್ಪೇಸ್ ಎಂಜಿನಿಯರ್‌ಗಳ ಸಮಾವೇಶ

ಬೆಂಗಳೂರು: ಭಾರತೀಯ ಇಂಜಿನಿಯರ್‌ಗಳ ಸಂಸ್ಥೆಯ ಏರೋಸ್ಪೇಸ್ ಇಂಜಿನಿಯರಿಂಗ್ ಡಿವಿಜನ್ ಬೋರ್ಡ್ ವತಿಯಿಂದ ನವೆಂಬರ್ 14 ಹಾಗೂ 15ರಂದು ಬೆಂಗಳೂರಿನಲ್ಲಿ ಏರೋಸ್ಪೇಸ್ ಎಂಜಿನಿಯರ್‌ಗಳ ರಾಷ್ಟ್ರೀಯ ಸಮಾವೇಶ ಆಯೋಜಿಸಲಾಗಿದೆ. ಸಮಾವೇಶದಲ್ಲಿ 'ಮುಂದಿನ ದಶಕಗಳಿಗೆ ಭಾರತೀಯ ಅಂತರಿಕ್ಷಯಾನ ತಂತ್ರಜ್ಞಾನಗಳ ಅನ್ವೇಷಣೆ ಮತ್ತು ಹಾದಿಗಳು' ವಿಷಯ ಕುರಿತ ವಿಚಾರಸಂಕಿರಣ ನಡೆಯಲಿದೆ ಎಂದು ಸಂಘಟನಾ ಸಮಿತಿ ಅಧ್ಯಕ್ಷ ಡಾ| ಪ್ರೊ. ಟಿ.ಕೃಷ್ಣ ಪ್ರಕಟಣೆಯಲ್ಲಿ ತಿಳಿಸಿದ್ದಾರೆ. ಸಮಾವೇಶದಲ್ಲಿ ಅಂತರಿಕ್ಷಯಾನ ವಿಭಾಗದ ಸಂಶೋಧನ, ಅಭಿವೃದ್ಧಿ, ತಯಾರಿಕೆ, ಬಿಡಿಭಾಗಗಳ ಜೋಡಣೆ, ಪರೀಕ್ಷೆ, ಮಾರಾಟ, ಮಾರುಕಟ್ಟೆ ಇತ್ಯಾದಿಗಳ ಕುರಿತು ಸಮಗ್ರ ಚರ್ಚೆ ನಡೆಯಲಿದೆ ಎಂದು ಹೇಳಿದ್ದಾರೆ.

ಸಂಜೆವಾಣಿ

ಶನಿವಾರ 11 ಅಕ್ಟೋಬರ್ 2014




ಇತ್ತೀಚೆಗೆ ನಗರದಲ್ಲಿ ನಡೆದ ಶೇಷಾದ್ರಿಪುರಂ ಕಾಲೇಜಿನ ಯುವ ರೆಡ್ ಕ್ರಾಸ್ ಘಟಕವನ್ನು ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ರಕ್ತದಾನ ಸಂಘಟಕ ರಾಜು ಚಂದ್ರಶೇಖರ್ ಅವರು ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಅಧ್ಯಯನ ನಿರ್ದೇಶಕ ಡಾ. ಎಂ. ಪ್ರಕಾಶ್, ಪ್ರಾಂಶುಪಾಲ ಪ್ರೊ. ವಿ.ಆರ್. ಭಾರ್ಗವಿ ರೆಡ್ ಕ್ರಾಸ್ ಕಾರ್ಯಕ್ರಮ ಅಧಿಕಾರಿ ಸಂತೋಷ್ ನಾಯಕ್ ಇದ್ದಾರೆ.

ಹೊಸ ದಿಗಂತ | 3

ಬೆಂಗಳೂರು
ಶುಕ್ರವಾರ, 10 ಅಕ್ಟೋಬರ್ 2014

# ಗುರುಶಿಷ್ಯರ ಬಾಂಧವ್ಯಕ್ಕೆ ಉಪನ್ಯಾಸಕರ ನಡತೆ ಬಹು ಮುಖ್ಯ

ಬೆಂಗಳೂರು: ಗುರು ಶಿಷ್ಯರ ಉತ್ತಮ ಬಾಂಧವ್ಯಕ್ಕೆ ಉಪನ್ಯಾಸಕರ ನಡತೆ ಅತೀ ಮುಖ್ಯ ಎಂದು ಕ್ರಿಯಾತ್ಮಕ ಬೋಧನಾ ಅಕಾಡೆಮಿ ಅಧ್ಯಕ್ಷ ಡಾ. ಗುರುರಾಜ ಕರ್ಜಗಿ ಅಭಿಪ್ರಾಯಪಟ್ಟರು.

ಕೆಂಗೇರಿಯ ಶೇಷಾದ್ರಿಪುರಂ ಕಾಲೇಜ್ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್‌ನಲ್ಲಿ ಶಿಕ್ಷಣ ನೈತಿಕತೆ ಮತ್ತು ಬೋಧನಾ ನೈಪುಣ್ಯತೆ ಬಗ್ಗೆ ನಡೆದ ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡಿದರು. ಪ್ರಸ್ತುತ ಮೌಲ್ಯಾಧಾರಿತ ಶಿಕ್ಷಣದ ಅಗತ್ಯವಿದೆ. ಶಿಕ್ಷಕರು ವಿದ್ಯಾರ್ಥಿಗಳ ಜ್ಞಾನದ ದಾಹ ತಿಳಿದು ಬೋಧಿಸಬೇಕು. ಹೀಗಾದಾಗ ಮಾತ್ರ ವಿದ್ಯಾರ್ಥಿಗಳಲ್ಲಿ ಆತ್ಮವಿಶ್ವಾಸ ಹೆಚ್ಚುತ್ತದೆ. ಆತ್ಮ ವಿಶ್ವಾಸ ಹೆಚ್ಚಾದರೆ ಮಾತ್ರ ಉತ್ತಮ ಫಲಿತಾಂಶ ನಿರೀಕ್ಷಿಸಬಹುದು ಎಂದರು.

ಉಪನ್ಯಾಸಕರು ಬೋಧನೆಯ ಜೊತೆಗೇ ಮಕ್ಕಳೊಂದಿಗೆ ಸನ್ನಡತೆಯಿಂದ ಬೆರೆಯಬೇಕು. ವಿದೇಶಿ ಶಿಕ್ಷಣ ಪದ್ಧತಿಯಲ್ಲಿ ನಮ್ಮ ದೇಶದಲ್ಲಿರುವಂತೆ ಸಾಂಪ್ರದಾಯಿಕ ಪದ್ಧತಿಯ ವಿವೇಚನೆಗಳಿಲ್ಲ, ಗುರುಶಿಷ್ಯರ ನಡುವೆ ಉತ್ತಮ ಬಾಂಧವ್ಯಗಳಿಲ್ಲ. ಅಲ್ಲೇನಿದ್ದರೂ ಕೇವಲ ತಾಂತ್ರಿಕ ಜ್ಞಾನ ಹೆಚ್ಚಾಗಿರುತ್ತದೆ ಎಂದರು. ಶೇಷಾದ್ರಿಪುರಂ ಕಾಲೇಜು ಅಧ್ಯಕ್ಷ ಎನ್.ಆರ್.ಪಂಡಿತಾಚಾರ್ಯ ಮಾತನಾಡಿ, ಶಿಕ್ಷಕರಲ್ಲಿ ಅಹಂ ಇರಬಾರದು. ಈ ನಿಟ್ಟಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸ್ವಚ್ಛತೆ ಕಾಪಾಡಿಕೊಳ್ಳಬೇಕಿದೆ ಎಂದರು.



ಕಾರ್ಯಕ್ರಮದಲ್ಲಿ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ.ವೂಡಿ ಕೃಷ್ಣ, ಪ್ರಾಂಶುಪಾಲ ಪ್ರೊ. ಜಯರಾಂ, ಪದವಿ ಪೂರ್ವ ಕಾಲೇಜು ಪ್ರಾಂಶುಪಾಲ ಸತೀಶ್ ಮತ್ತಿತರರು ಉಪಸ್ಥಿತರಿದ್ದರು.

ಬೆಂಗಳೂರು
ಶುಕ್ರವಾರ, 3 ಅಕ್ಟೋಬರ್ 2014

## ರಾಜಕಾರಣಿಗಳಿಗೆ ಸಚಿವ ಎಚ್.ಕೆ. ಪಾಟೀಲ್ ಸಲಹೆ

# ಗಾಂಧಿ ಹಾದಿಯನ್ನು ನೆನೆದು ಕಾರ್ಯ ನಿರ್ವಹಿಸಿ

ದಿಗಂತ ವರದಿ: ಬೆಂಗಳೂರು, ಅ.2

ಮಹಾತ್ಮ ಗಾಂಧೀಜಿ ನಡೆದು ಬಂದ ಹಾದಿಯನ್ನು ರಾಜಕಾರಣಿಗಳು ನೆನಪಿನಲ್ಲಿಟ್ಟುಕೊಂಡು ಕಾರ್ಯ ನಿರ್ವಹಿಸಬೇಕು ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ. ಪಾಟೀಲ್ ಕರೆ ನೀಡಿದರು.

ನಗರದ ಕುಮಾರಪಾರ್ಕ್‌ನ ಗಾಂಧಿಭವನದಲ್ಲಿ ಗುರುವಾರ ಸಮಿತಿ ಸಭಾಂಗಣದ ಉದ್ಘಾಟನೆ ಮತ್ತು ಜನಪದ ಹಾಗೂ ಮಾರ್ಚ್ ಆಫ್ ಕರ್ನಾಟಕ ವಿಶೇಷ ಸಂಚಿಕೆ ಬಿಡುಗಡೆ ಮಾಡಿ ಅವರು ಮಾತನಾಡಿದರು.

ಹಿಂಸೆ ನಮ್ಮಿಂದ ದೂರವಾಗಬೇಕು, ಶಾಂತಿ ಸೌಹಾರ್ದತೆ ಸಾರುವ ರಾಷ್ಟ್ರ ನಮ್ಮದಾಗಬೇಕೆಂದು ಗಾಂಧೀಜಿ ಹೇಳಿದ್ದರು. ಜನಸೇವೆಗಾಗಿ ಬಂದ ಜನನಾಯಕ ಗಾಂಧೀಜಿ. ಅವರು ದೇಶಕ್ಕೆ ಸಲ್ಲಿಸಿದ ಅಪಾರ ಸೇವೆಯನ್ನು ನೆನಪಿನಲ್ಲಿಟ್ಟುಕೊಂಡು ಕಾರ್ಯ ನಿರ್ವಹಿಸಬೇಕು ಎಂದರು.

### ಗಾಂಧೀಜಿ ಹಿಂದಿಗಿಂತ ಇಂದು ಪ್ರಸ್ತುತ

ವಿನೋಬಾ ಸೇಜ್ ಆಫ್ ದಿ ಏಜ್ ಕೃತಿ ಲೋಕಾರ್ಪಣೆ ಮಾಡಿ ಮಾತನಾಡಿದ ದೆಹಲಿ ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ರಾಮಚಂದ್ರ ರಾಹಿ, ಗಾಂಧೀಜಿ ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತ. ಅಂದು ಅಹಿಂಸಾ ಚಳವಳಿ, ಸತ್ಯಾಗ್ರಹದಂತಹ ಅಸ್ತ್ರಗಳಿಂದ ದೇಶವನ್ನೇ ಪರಿವರ್ತಿಸಿದರು. ಸತ್ಯಾಗ್ರಹದಂತಹ



ಅಸ್ತ್ರವನ್ನು ಇಂದು ಪ್ರಯೋಗಿಸುವ ಕಾಲ ಬಂದಿದೆ ಎಂದರು. ಇಂದು ಪೊರಕೆ ಹಿಡಿದು ಕಸ ತೆಗೆದು ಸ್ವಚ್ಛ ಭಾರತ ಅಭಿಯಾನವನ್ನು ಹಮ್ಮಿಕೊಂಡಿರುವುದು ಸ್ವಾಗತಾರ್ಹ. ಬಾಹ್ಯವಾಗಿ ಕಸ ಹೊಡೆದರೆ ಸಾಲದು, ಮನಸ್ಸಿನ ಅಂತರ್ಯದಲ್ಲಿನ ಕಸ ತೊಡೆಯುವ ಕೆಲಸವಾಗಬೇಕು.

ನಾವು ಮಾಡಿದ ತಪ್ಪನ್ನು ಮಾಡುತ್ತಲೇ ಇರುತ್ತೇವೆ. ಆದರೆ, ಭ್ರಷ್ಟಾಚಾರ ಯಾರೇ ಮಾಡಲಿ ಆ ಭ್ರಷ್ಟತೆಗೆ ನಾವೇ ಜವಾಬ್ದಾರರು. ಮಾಡಿದ ತಪ್ಪುಗಳನ್ನು ಮತ್ತೆ ಮತ್ತೆ ಮಾಡದಂತೆ ಮನಸ್ಸಿನ ಸ್ವಚ್ಛತೆ ಮಾಡಿಕೊಳ್ಳಬೇಕೆಂಬುದು ಗಾಂಧೀಜಿಯವರ ಕನಸಾಗಿತ್ತು ಎಂದರು.

ಇದೇ ವೇಳೆ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಗಾಂಧಿ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಕಟ್ಟಡ ಉದ್ಘಾಟಿಸಿದರು. ವಾರ್ತಾ ಸಚಿವ ರೋಶನ್ ಬೇಗ್ ಅಧ್ಯಕ್ಷತೆ ವಹಿಸಿದ್ದರು. ಗಾಂಧಿ ಅನುಯಾಯಿ ನೇತ್ರಪಾಲ್‌ಸಿಂಗ್ ಸೇರಿದಂತೆ ಹಲವು ಗಣ್ಯರಿಗೆ ಸನ್ಮಾನಿಸಿ ಗೌರವಿಸಲಾಯಿತು.

ಕಾರ್ಯಕ್ರಮದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ ಪ್ರಧಾನ ಕಾರ್ಯದರ್ಶಿ ಶಾಲಿನಿ ರಜನೀಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ.ಶ್ರೀನಿವಾಸಯ್ಯ, ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್, ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ವೂಡೇ ಪಿ. ಕೃಷ್ಣ ಸೇರಿದಂತೆ ಹಲವರು ಹಾಜರಿದ್ದರು.

# ಗಾಂಧಿ ಭವನಕ್ಕೆ ಹೊಸ ಕಳೆ



ಗಾಂಧಿ ಭವನದಲ್ಲಿನ ಗಾಂಧಿ ಪ್ರತಿಮೆಗೆ ಸಿಎಂ ಸಿದ್ದರಾಮಯ್ಯ, ಪುಷ್ಪ ಅರ್ಪಿಸಿ ಗೌರವ ಸಲ್ಲಿಸಿದರು. ಸಚಿವರಾದ ಉಮಾಶ್ರೀ, ರೋಷನ್ ಬೇಗ್ ಇತರರಿದ್ದರು.

**ಬೆಂಗಳೂರು:** ನಗರದ ಶಿವಾನಂದ ವೃತ್ತದಲ್ಲಿರುವ ಗಾಂಧಿ ಭವನ ಹೊಸ ರೂಪ ಪಡೆದುಕೊಂಡಿದೆ. ಭವನದ ಆವರಣದಲ್ಲಿ ಗಾಂಧಿಯೇ ಇದ್ದಾರೆನ್ನುವ ಹಾಗೆ ಅವರ ನಾನಾ ರೀತಿಯ ಕಲಾಕೃತಿಗಳು ಎದ್ದು ನಿಂತಿವೆ. ಅಲ್ಲದೇ, ಗಾಂಧಿ ಅಧ್ಯಯನ ಮತ್ತು ಗಾಂಧಿ ವಿಚಾರಗಳ ಕುರಿತ ಸಂಶೋಧನೆಗಾಗಿಯೇ ನಿರ್ಮಾಣವಾದ ನೂತನ ಕಟ್ಟಡ. ಜೊತೆಗೆ ಸುಸಜ್ಜಿತ ಸಮಿತಿ ಸಭಾಂಗಣದಿಂದಾಗಿ ಭವನಕ್ಕೆ ಹೊಸ ಕಳೆ ಮೂಡಿದೆ. ಗಾಂಧಿ ಜಯಂತಿ ದಿನದಂದೇ ಇವೆಲ್ಲವೂ ಲೋಕಾರ್ಪಣೆಗೊಂಡಿದೆ.

ಸಿದ್ದರಾಮಯ್ಯ ಗುರುವಾರ ಗಾಂಧಿ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದ ಕಟ್ಟಡ ಉದ್ಘಾಟಿಸಿದರು. ಇದಕ್ಕೂ ಮುನ್ನ ಆವರಣದಲ್ಲಿನ ಗಾಂಧಿ ಪ್ರತಿಮೆಗೆ ಪುಷ್ಪ ಅರ್ಪಿಸಿ ಗೌರವ ಸಲ್ಲಿಸಿದರು. ನಂತರ ಗಾಂಧಿ ಸ್ಮಾರಕ ನಿಧಿ, ವಾರ್ತಾ ಇಲಾಖೆ ಹಾಗೂ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಸೇರಿದಂತೆ ವಿವಿಧ ಸಂಸ್ಥೆಗಳ ಸಹ ಯೋಗದೊಂದಿಗೆ ಆಯೋಜಿಸಿದ್ದ ಗಾಂಧಿ ಜಯಂತಿ ಸಮಾರಂಭದಲ್ಲಿ ಗ್ರಾಮೀಣಾಭಿ ವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್, 'ಜನಪದ' ಹಾಗೂ 'ಮಾರ್ಚ್ ಆಫ್ ಕರ್ನಾಟಕ' ಪತ್ರಿಕೆಗಳ ವಿಶೇಷ ಸಂಚಿಕೆ ಬಿಡುಗಡೆ ಮಾಡಿದರು. ಜೊತೆಗೆ ನೂತನ ಸಭಾಂಗಣ ಉದ್ಘಾಟಿಸಿ ಮಾತನಾಡಿದರು.

'ಗಾಂಧಿ ಚಿಂತನೆಗಳನ್ನು ಕೇವಲ ಓದಿದರೆ ಸಾಲದು, ಅವರ ವಿಚಾರಗಳನ್ನು ಕಾರ್ಯರೂಪಕ್ಕೆ ತರಬೇಕಿದೆ. ಹಳ್ಳಿಗಳ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ ಎಂದು ಅವರು ಹೇಳಿದ್ದ ಮಾತುಗಳನ್ನು ನಿಜವಾಗಿಸಬೇಕಿದೆ. ಸಪ್ತ ಮಂತ್ರಗಳ ಮೂಲಕ ಗಾಂಧಿ ಕಂಡ ಗ್ರಾಮ ರಾಜ್ಯದ ಕನಸನ್ನು ನನಸಾಗಿಸಬೇಕಿದೆ' ಎಂದರು. ದೆಹಲಿ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ರಾಮಚಂದ್ರ ರಾಹಿ, ವಿನೋಬಾ ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ವಾರ್ತಾ ಸಚಿವ ರೋಷನ್ ಬೇಗ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಪ್ರಸ್ತಾವಿಕವಾಗಿ ಮಾತನಾಡಿದರು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಗಾಂಧಿವಾದಿ ಸುಬ್ಬರಾವ್, ವಾರ್ತಾ ಇಲಾಖೆ ಪ್ರಧಾನ ಕಾರ್ಯದರ್ಶಿ ಶಾಲಿನಿ ರಜನೀಶ್, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್ ಹಾಜರಿದ್ದರು. ಕಾರ್ಯಕ್ರಮಕ್ಕೂ ಮುನ್ನ ನಗರದ ಆನಂದ ರಾವ್ ವೃತ್ತದಿಂದ ಗಾಂಧಿ ಭವನದವರೆಗೆ ಸದ್ಭಾವನಾ ಯಾತ್ರೆ ನಡೆಸಲಾಯಿತು.

**ಸ್ವಾಗತಾರ್ಹ, ಆದರೆ...:** ಅಡ್ವೊಕೇಟ್ ಜನರಲ್ ಪ್ರೊ.ರವಿವರ್ಮ ಕುಮಾರ್ ಮಾತನಾಡಿ, ಗಾಂಧಿ ಹಂತಕರು ಅಖಂಡ ಭಾರತದ ಮಾತನಾಡುತ್ತಿದ್ದಾರೆ. ಅವರು ಸತ್ಯವನ್ನು ಮರೆಮಾಚುತ್ತಿದ್ದಾರೆ. ಇದು ಗಾಂಧಿಗೆ ಮಾಡಿದ ಅವಮಾನವಾಗಿದೆ ಎಂದರು. ಸ್ವಚ್ಛ ಭಾರತ ಅಭಿಯಾನ ಸ್ವಾಗತಾರ್ಹ. ಆದರೆ ಕೇವಲ ಬಾಹ್ಯವಾಗಿ ಕಸ ಗುಡಿಸಿದರೆ ಸಾಲದು. ನಮ್ಮ ನಮ್ಮ ಮನಸ್ಸುಗಳನ್ನು ಸ್ವಚ್ಛಗೊಳಿಸಿಕೊಳ್ಳುವ ಕೆಲಸ ಆಗಬೇಕಿದೆ ಎಂದು ಪರೋಕ್ಷವಾಗಿ ಕೇಂದ್ರ ಸರ್ಕಾರದ ಕಾರ್ಯಕ್ರಮವನ್ನು ಟೀಕಿಸಿದರು. ಆದರೆ ಕೆಲ ಸಭಿಕರು, ಈ ಮಾತು ಇಲ್ಲಿ ಅವಶ್ಯವೇ ಇರಲಿಲ್ಲ ಎಂದು ಮಾತನಾಡಿಕೊಂಡಿದ್ದು ವಾಸ್ತವವನ್ನು ಬಿಂಬಿಸುವಂತಿತ್ತು.

4 ಹೊಸ ದಿಗಂತ

ಬೆಂಗಳೂರು
ಬುಧವಾರ, 17 ಸೆಪ್ಟೆಂಬರ್ 2014

# ಗೌರ್ನರ್‌ಗೆ ಅಭಿನಂದನೆ...



ಗಾಂಧಿಭವನದ ಅಧ್ಯಕ್ಷ ಡಾ. ಹೋ. ಶ್ರೀನಿವಾಸಯ್ಯ ನೇತೃತ್ವದಲ್ಲಿ ಮಂಗಳವಾರ ರಾಜಭವನಕ್ಕೆ ಭೇಟಿ ನೀಡಿದ್ದ ನಿಯೋಗ ರಾಜ್ಯಪಾಲ ವಜೂಭಾಯಿ ರುಡಾಭಾಯಿ ವಾಲಾ ಅವರನ್ನು ಭೇಟಿ ಮಾಡಿ ಅಭಿನಂದನೆ ಸಲ್ಲಿಸಿತು.

ಬೆಂಗಳೂರು ಉದಯವಾಣಿ

ಮಂಗಳವಾರ | ಸೆಪ್ಟೆಂಬರ್ | 16 | 2014

# 'ಇಂಜಿನಿಯರ್ ಜ್ಞಾನ ರಾಷ್ಟ್ರದ ಬೆಳವಣಿಗೆಗೆ ಬಳಸಿ'

ಬೆಂಗಳೂರು: ದೇಶದಲ್ಲಿ ಪ್ರತಿಭಾನ್ವಿತ ಇಂಜಿನಿಯರ್‌ಗಳಿದ್ದು, ಅವರ ಜ್ಞಾನವನ್ನು ರಾಷ್ಟ್ರದ ಬೆಳವಣಿಗೆಗಾಗಿ ಸರ್ಕಾರ ಉಪಯೋಗಿಸಿಕೊಳ್ಳಬೇಕು ಎಂದು ಎಂದು ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್‌ನ ನಿರ್ದೇಶಕ ಡಾ. ಬಾಲದೇವ್‌ರಾಜ್ ಸಲಹೆ ನೀಡಿದ್ದಾರೆ.

ನಗರದ ಇಂಜಿನಿಯರ್ಸ್ ಸಂಸ್ಥೆಯಲ್ಲಿ ಸೋಮವಾರ ನಡೆದ 47ನೇ ಇಂಜಿನಿಯರ್‌ಗಳ ದಿನಾಚರಣೆ ಹಾಗೂ ಸರ್ ಎಂ. ವಿಶ್ವೇಶ್ವರಯ್ಯ ಅವರ 154ನೇ ಜನ್ಮ ದಿನಾಚರಣೆ ಉದ್ಘಾಟಿಸಿದ ಅವರು, ದೇಶದ ಅಭಿವೃದ್ಧಿಯಲ್ಲಿ ಇಂಜಿನಿಯರ್‌ಗಳ ಪಾತ್ರ ಮುಖ್ಯವಾಗಿದೆ. ನಮ್ಮಲ್ಲಿ ಹಲವು ಪ್ರತಿಭಾನ್ವಿತ ಇಂಜಿನಿಯರ್‌ಗಳಿದ್ದು, ಅವರ ಜ್ಞಾನವನ್ನು ದೇಶದ ಬೆಳವಣಿಗೆಗಾಗಿ ಬಳಸಿಕೊಳ್ಳಬೇಕು ಎಂದರು.

ಹೆಚ್ಚುತ್ತಿರುವ ಜನಸಂಖ್ಯೆಗೆ ವಿದ್ಯುತ್, ರಸ್ತೆ, ನೀರು ಸೇರಿದಂತೆ ಅಗತ್ಯ ಮೂಲಸೌಕರ್ಯ ಒದಗಿಸುವುದು ಸವಾಲಾಗಿದೆ. ಹೀಗಾಗಿ ನೀತಿ ನಿರೂಪಕರು ಪ್ರತಿಭಾನ್ವಿತ ಇಂಜಿನಿಯರ್‌ಗಳ ನೆರವು ಪಡೆದುಕೊಳ್ಳಬೇಕು. ಇತ್ತೀಚೆಗೆ ನ್ಯಾನೋ ತಂತ್ರಜ್ಞಾನ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿದೆ. ಆ ತಂತ್ರಜ್ಞಾನವನ್ನು ಕೃಷಿ ಮತ್ತು ತೋಟಗಾರಿಕೆ ಕ್ಷೇತ್ರದಲ್ಲಿ ಬಳಸಿಕೊಳ್ಳಬೇಕಿದೆ ಎಂದರು.



ನಗರದ ಇಂಜಿನಿಯರ್ಸ್ ಸಂಸ್ಥೆಯಲ್ಲಿ ಸೋಮವಾರ ನಡೆದ 47ನೇ ಇಂಜಿನಿಯರ್‌ಗಳ ದಿನಾಚರಣೆ ಹಾಗೂ ಸರ್ ಎಂ. ವಿಶ್ವೇಶ್ವರಯ್ಯ ಅವರ 154ನೇ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ನಾಲ್ವರು ನಾಡಿನ ಖ್ಯಾತ ಇಂಜಿನಿಯರ್‌ಗಳನ್ನು ಸಚಿವ ಎಚ್.ಕೆ. ಪಾಟೀಲ್ ಸನ್ಮಾನಿಸಿದರು.

ದೇಶದಲ್ಲಿನ ಅಣು ವಿದ್ಯುತ್ ಸ್ಥಾವರಗಳು ಸುರಕ್ಷಿತವಾಗಿದ್ದು, ಈ ಬಗ್ಗೆ ಯಾರೂ ಆತಂಕಪಡುವ ಅಗತ್ಯ ಇಲ್ಲ. ಜಲವಿದ್ಯುತ್ ಇಲ್ಲದೇ ಇದ್ದಾಗ ಕಲ್ಲಿದ್ದಲು ಮೂಲಕ ಉಷ್ಣ ವಿದ್ಯುತ್ ತಯಾರಿಸಲಾಗುತ್ತಿದೆ. ಇದು ದುಬಾರಿ ವೆಚ್ಚದ್ದು ಮಾತ್ರವಲ್ಲ, ಪರಿಸರಕ್ಕೆ ಮಾರಕ. ಹೀಗಾಗಿ ನಮ್ಮ ಮುಂದಿರುವುದು ಅಣು ವಿದ್ಯುತ್ ಒಂದೇ ಪರಿಹಾರ ಎಂದು ಹೇಳಿದರು.

ನಾಲ್ವರು ಖ್ಯಾತ ಇಂಜಿನಿಯರ್‌ಗಳಾದ ಜಲಮಂಡಳಿಯ ನಿವೃತ್ತ ಮುಖ್ಯ ಇಂಜಿನಿಯರ್ ಜಿ.ಟಿ. ಪ್ರಕಾಶ್, ಬಿಎನ್‌ಎಂ ತಾಂತ್ರಿಕ ಸಂಸ್ಥೆಯ ಡೀನ್ ಡಾ. ಕೆ. ರಂಗಾ, ಗ್ಯಾಮನ್ ಇಂಡಿಯಾ ಲಿಮಿಟೆಡ್‌ನ ನಿವೃತ್ತ ವ್ಯವಸ್ಥಾಪಕ ನಿರ್ದೇಶಕ ಎಸ್.ಎ. ರೆಡ್ಡಿ ಹಾಗೂ ಇಸ್ರೋ ಉಪಗ್ರಹ ಕೇಂದ್ರದ ನಿರ್ದೇಶಕ ಎಸ್.ಕೆ. ಶಿವಕುಮಾರ್ ಅವರಿಗೆ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್‌ನ ನಿರ್ದೇಶಕ ಡಾ. ಬಾಲದೇವ್‌ರಾಜ್ ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದರು.

ಇಂಜಿನಿಯರ್ಸ್ ಸಂಸ್ಥೆ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕಾರ್ಯದರ್ಶಿ ಡಾ. ಪಿ. ವಿಜಯ್ ಕುಮಾರ್ ಇದ್ದರು.

ವಿಜಯವಾಣಿ
BANGALORE
ಮಂಗಳವಾರ
16 ಸೆಪ್ಟೆಂಬರ್ 2014

# ರಾಷ್ಟ್ರದ ಅಭಿವೃದ್ಧಿಗೆ ಶ್ರಮಿಸಿ



ನಗರದ ಇಂಜಿನಿಯರ್ಸ್ ಸಂಸ್ಥೆಯಲ್ಲಿ ಸೋಮವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಜಿ.ಟಿ. ಪ್ರಕಾಶ್, ಡಾ. ಕೆ. ರಂಗ, ಎಸ್.ಎ. ರೆಡ್ಡಿ ಹಾಗೂ ಎಸ್.ಎ. ಶಿವಕುಮಾರ್ ಅವರಿಗೆ ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ. ಪಾಟೀಲ್ ಶ್ರೇಷ್ಠ ಇಂಜಿನಿಯರ್ ಪ್ರಶಸ್ತಿ ನೀಡಿ ಸನ್ಮಾನಿಸಿದರು.

ಬೆಂಗಳೂರು: ರಾಷ್ಟ್ರದ ಅಭಿವೃದ್ಧಿಯಲ್ಲಿ ಇಂಜಿನಿಯರ್‌ಗಳ ಪಾತ್ರ ಮುಖ್ಯವಾದುದು. ಅವರ ಜ್ಞಾನವನ್ನು ರಾಷ್ಟ್ರದ ಅಭಿವೃದ್ಧಿಗೆ ಬಳಸಿಕೊಳ್ಳಬೇಕು ಎಂದು ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್ ನಿರ್ದೇಶಕ ಡಾ. ಬಲದೇವ್‌ರಾಜ್ ಹೇಳಿದರು.

ನಗರದ ಇಂಜಿನಿಯರ್ಸ್ ಸಂಸ್ಥೆಯಲ್ಲಿ 47ನೇ ಇಂಜಿನಿಯರ್‌ಗಳ ದಿನ ಹಾಗೂ ಸರ್‌ಎಂವಿ ಅವರ 154ನೇ ಜನ್ಮದಿನಾಚರಣೆ ಉದ್ಘಾಟಿಸಿ ಮಾತನಾಡಿದರು.

ಹೆಚ್ಚಾಗುತ್ತಿರುವ ಜನಸಂಖ್ಯೆಗೆ ವಿದ್ಯುತ್, ರಸ್ತೆ, ನೀರು ಸೇರಿ ಅಗತ್ಯ ಮೂಲಸೌಕರ್ಯ ಒದಗಿಸುವುದು ಸವಾಲಾಗಿರುವುದರಿಂದ ನೀತಿ ನಿರೂಪಕರು ಹಾಗೂ ರಾಜಕಾರಣಿಗಳು ಪ್ರತಿಭಾನ್ವಿತ ಇಂಜಿನಿಯರ್‌ಗಳ ಸೇವೆ ಪಡೆದು ರಾಷ್ಟ್ರದ ಅಭಿವೃದ್ಧಿಗೆ ಸಹಕರಿಸಬೇಕು. ಕೃಷಿ ಹಾಗೂ ತೋಟಗಾರಿಕೆ ಕ್ಷೇತ್ರದಲ್ಲಿ ನ್ಯಾನೋ ತಂತ್ರಜ್ಞಾನ ಬಳಸಿಕೊಳ್ಳಬೇಕು ಎಂದು ಸಲಹೆ ನೀಡಿದರು.

**ಮುಂದಿನ ಪೀಳಿಗೆ ರೋಬೋಗಳದ್ದು:** ಮುಂದಿನ ಪೀಳಿಗೆ ರೋಬೋಗಳದ್ದಾಗಲಿದೆ. ಎಲ್ಲ ಕ್ಷೇತ್ರಗಳಿಗೂ ರೋಬೋಗಳು ಪ್ರವೇಶಿಸುತ್ತಿವೆ. ಈಗಾಗಲೇ ವೈದ್ಯಕೀಯ ಕ್ಷೇತ್ರದಲ್ಲಿ ಇವುಗಳು ಯಶಸ್ವಿಯಾಗಿವೆ. ಮುಂದೆ ಎಲ್ಲ ಕ್ಷೇತ್ರವನ್ನು ನಿಯಂತ್ರಿಸಲಿವೆ ಎಂದರು.

ಇಂಜಿನಿಯರ್ಸ್ ಸಂಸ್ಥೆ ಅಧ್ಯಕ್ಷ ಡಾ. ಪೂಡೇ ಪಿ. ಕೃಷ್ಣ, ಕಾರ್ಯದರ್ಶಿ ಡಾ. ಪಿ. ವಿಜಯಕುಮಾರ್ ಮತ್ತಿತರರು ಉಪಸ್ಥಿತರಿದ್ದರು.

**ಶ್ರೇಷ್ಠ ಇಂಜಿನಿಯರ್ ಪ್ರಶಸ್ತಿ**

ಜಲಮಂಡಳಿಯ ನಿವೃತ್ತ ಮುಖ್ಯ ಇಂಜಿನಿಯರ್ ಜಿ.ಟಿ. ಪ್ರಕಾಶ್, ಬಿಎನ್‌ಎಂ ತಾಂತ್ರಿಕ ಸಂಸ್ಥೆಯ ಡೀನ್ ಡಾ. ಕೆ. ರಂಗ, ಗ್ರಾಮನ್ ಇಂಡಿಯಾ ಕಂಪನಿಯ ನಿವೃತ್ತ ವ್ಯವಸ್ಥಾಪಕ ನಿರ್ದೇಶಕ ಎಸ್.ಎ. ರೆಡ್ಡಿ ಹಾಗೂ ಇಸ್ರೋ ಉಪಗ್ರಹ ಕೇಂದ್ರದ ನಿರ್ದೇಶಕ ಎಸ್.ಎ. ಶಿವಕುಮಾರ್ ಅವರಿಗೆ ಶ್ರೇಷ್ಠ ಇಂಜಿನಿಯರ್ ಪ್ರಶಸ್ತಿ ನೀಡಿ, ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ. ಪಾಟೀಲ್ ಸನ್ಮಾನಿಸಿದರು.

ಈ ಸಂಜೆ ಸೋಮವಾರ, 15-09-2014



ಶೇಷಾದ್ರಿಪುರಂ ವಿದ್ಯಾಸಂಸ್ಥೆ ಆಯೋಜಿಸಿದ್ದ ನಿವೃತ್ತ ಶಿಕ್ಷಕರ ಅಭಿನಂದನಾ ಸಮಾರಂಭದಲ್ಲಿ ಬಿಹಾರದ ವಿಶ್ರಾಂತ ರಾಜ್ಯಪಾಲ ನ್ಯಾ.ಡಾ.ಎಂ.ರಾಮಾಜೋಯಿಸ್ ಮತ್ತು ವಿಮಲಾ ರಾಮಾಜೋಯಿಸ್ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯೂ.ಎಚ್.ಅನಿಲ್‌ಕುಮಾರ್, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ.ಪಿ.ಕೃಷ್ಣ, ಕೋಶಾಧ್ಯಕ್ಷ ಬಿ.ಎಂ.ಪಾರ್ಥಸಾರಥಿ, ಸಹ ಕಾರ್ಯದರ್ಶಿ ಎಸ್.ಶೇಷನಾರಾಯಣ, ಸಹಾಯಕ ಕಾರ್ಯದರ್ಶಿ ಸರೋಜ [illegible].ಎಂ.ನಂಜಪ್ಪ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ

7 ಸೋಮವಾರ 15 ಸೆಪ್ಟೆಂಬರ್ 2014



ಇತ್ತೀಚೆಗೆ ಶೇಷಾದ್ರಿಪುರಂ ವಿದ್ಯಾಸಂಸ್ಥೆಯಲ್ಲಿ ನಡೆದ ನಿವೃತ್ತ ಶಿಕ್ಷಕರ ಅಭಿನಂದನಾ ಸಮಾರಂಭದಲ್ಲಿ ಬಿಹಾರದ ವಿಶ್ರಾಂತ ರಾಜ್ಯಪಾಲ ನ್ಯಾಯಮೂರ್ತಿ ಡಾ. ಎಂ. ರಾಮಾಜೋಯಿಸ್ ಮತ್ತು ವಿಮಲಾ ರಾಮಾಜೋಯಿಸ್ ಅವರನ್ನು ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್. ಹೆಂಜಾರಪ್ಪ, ಡಬ್ಲ್ಯು.ಹೆಚ್. ಅನಿಲ್‌ಕುಮಾರ್, ಪ್ರಧಾನ ಕಾರ್ಯದರ್ಶಿ . ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ಬಿ.ಎಂ. ಪಾರ್ಥಸಾರಥಿ, ಸಹ ಕಾರ್ಯದರ್ಶಿ ಎಸ್. ಶೇಷ ನಾರಾಯಣ ಹಾಗೂ ಸಹಾಯಕ ಕಾರ್ಯದರ್ಶಿ ಸರೋಜ ಕೆ. ಎಂ. ನಂಜಪ್ಪ ಇದ್ದಾರೆ.

ಸೆಪ್ಟೆಂಬರ್ 13 2014 ಬೆಂಗಳೂರು

ಸಂಯುಕ್ತ ಕರ್ನಾಟಕ

# ಸಾಮಾಜಿಕ ತಾಣದಲ್ಲಿ ಗಾಂಧಿ ವಿಚಾರಧಾರೆ ಇರಲಿ

ಬೆಂಗಳೂರು, ಸೆ. 12: ಗಾಂಧೀಜಿ ವಿಚಾರಧಾರೆಗಳನ್ನು ಯುವಜನರೂ ಸೇರಿದಂತೆ ಎಲ್ಲರಿಗೂ ತಿಳಿಸಲು ಸಾಮಾಜಿಕ ತಾಣಗಳನ್ನು ಸದುಪಯೋಗಪಡಿಸಿಕೊಳ್ಳಲು ವಾರ್ತಾ ಸಚಿವ ಆರ್. ರೋಷನ್‌ಬೇಗ್ ಸಲಹೆ ನೀಡಿದರು. ಇಂದು ಸಾಮಾಜಿಕ ತಾಣಗಳು ಜನರಿಗೆ ಮಾಹಿತಿ ತಲುಪಿಸುವಲ್ಲಿ ಮಹತ್ತರ ಪಾತ್ರ ವಹಿಸುತ್ತಿವೆ. ಈ ಹಿನ್ನೆಲೆಯಲ್ಲಿ ಎಲ್ಲರೂ ಚಿಂತನೆ ನಡೆಸಬೇಕೆಂದು ತಿಳಿಸಿದರು.

ಶಿಲ್ಪಕಲಾ ಅಕಾಡೆಮಿ ಮತ್ತು ಗಾಂಧಿ ಸ್ಮಾರಕ ನಿಧಿ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ 'ಮಹಾತ್ಮ ಗಾಂಧಿ ಸಿಮೆಂಟ್ ಶಿಲ್ಪಕಲಾ ಶಿಬಿರ' ಉದ್ಘಾಟಿಸಿ ಮಾತನಾಡಿದ ಅವರು, ಇಂದಿನ ತಾಂತ್ರಿಕ ಜಗತ್ತಿನಲ್ಲಿ ಯುವ ಜನತೆಯನ್ನು ತಲುಪಬೇಕಾದರೆ ಸಾಮಾಜಿಕ ಜಾಲತಾಣಗಳು ಅನಿವಾರ್ಯವಾಗಿದ್ದು ಈ ಹಿನ್ನೆಲೆಯಲ್ಲಿ ಗಾಂಧಿಭವನದಲ್ಲಿ ಯುವ ತಂಡವನ್ನು ಸಿದ್ಧಗೊಳಿಸಿ ಗಾಂಧಿಜೀಯವರ ವಿಚಾರಧಾರೆ, ತತ್ವ, ಭ್ರಷ್ಟಾಚಾರದ ಬಗ್ಗೆ ಗಾಂಧಿ ಹೇಳಿರುವ ಮಾತುಗಳು, ದಕ್ಷಿಣ ಆಫ್ರಿಕಾದಲ್ಲಿ ಗಾಂಧಿ ಮಾಡಿದ ಭಾಷಣ ಹಾಗೂ ಗಾಂಧಿಜೀಯ ಬಗ್ಗೆ ಸಂಪೂರ್ಣ ಮಾಹಿತಿ ನೀಡುವ ಸಾಮಾಜಿಕ ಜಾಲ ತಾಣಗಳನ್ನು ಸಿದ್ಧಗೊಳಿಸಿ ಇದಕ್ಕೆ ಬೇಕಾದ ಎಲ್ಲಾ ರೀತಿಯ ನೆರವು ನೀಡುವುದಾಗಿ ತಿಳಿಸಿದರು.

ಗಾಂಧಿಜಿಯವರ ವಿಚಾರಧಾರೆ ಹಾಗೂ ಮಾಹಿತಿಗಳನ್ನು ಕಡ್ಡಾಯವಾಗಿ ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಇರುವಂತೆ ಅಭಿವೃದ್ಧಿ ಪಡಿಸಿದರೆ ಇದರಿಂದ ಕಡಿಮೆ ಸಮಯದಲ್ಲಿ ಹೆಚ್ಚು ಜನರನ್ನು ತಲುಪಲು ಸಾಧ್ಯವಾಗುತ್ತದೆ ಎಂದರು.

> ಗಾಂಧಿಜಿಯವರ ವಿಚಾರಧಾರೆ ಹಾಗೂ ಮಾಹಿತಿಗಳನ್ನು ಕಡ್ಡಾಯ ವಾಗಿ ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಇರುವಂತೆ ಅಭಿವೃದ್ಧಿ ಪಡಿಸಿದರೆ,ಕಡಿಮೆ ಸಮಯದಲ್ಲಿ ಹೆಚ್ಚು ಜನರನ್ನು ತಲುಪಲು ಸಾಧ್ಯ
> - ಆರ್.ರೋಷನ್‌ಬೇಗ್, ಸಚಿವ

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಮಾತನಾಡಿ, ಇತ್ತೀಚಿನ ದಿನಗಳಲ್ಲಿ ಯುವಕರಲ್ಲಿ ಹೆಚ್ಚಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಬಗ್ಗೆ ವಿಷಾದ ವ್ಯಕ್ತಪಡಿಸಿದ ಅವರು, ಈಗಿನ ಕಾಲದ ಯುವಕರಿಗೆ ಬದುವುದು ಗೊತ್ತಿಲ್ಲ, ಬದಲಾಗಿ ಸಾಯೋದು ಹೇಗೆ ಎಂದು ಗೊತ್ತಿದೆ. ಸಾಯೋದು ಹೇಗೆ ಎಂಬುದರ ಬಗ್ಗೆ ತಿಳಿಸಲು ಜಪಾನ್, ಚೈನಾ ಸೇರಿದಂತೆ ಇತರೆ ದೇಶಗಳಲ್ಲಿ ಲಕ್ಷಾಂತರ ಪುಸ್ತಕ ಪ್ರಕಟವಾಗುತ್ತಿದೆ. ಆದರೆ, ಉತ್ತಮ ರೀತಿಯಲ್ಲಿ ಬದುಕು ಹೇಗೆ ಎಂಬುದರ ಬಗ್ಗೆ ಪುಸ್ತಕಗಳು ಪ್ರಕಟವಾಗುತ್ತಿಲ್ಲ. ಆದ್ದರಿಂದ ಮಕ್ಕಳಿಗೆ ಹಾಗೂ ಯುವಕರಿಗೆ ಬದುಕುವುದು ಹೇಗೆ ಎಂಬುದನ್ನು ಕಲಿಸಬೇಕಿದೆ ಎಂದು ತಿಳಿಸಿದರು. ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷ ಮಹಾದೇವಪ್ಪ ಶಂಭುಲಿಂಗಪ್ಪ ಶೆಟ್ಟಿ ಹಾಗೂ ಚಿತ್ರಕಲಾ ಪರಿಷತ್‌ನ ಅಧ್ಯಕ್ಷ ಬಿ.ಎಲ್. ಶಂಕರ್ ಮತ್ತಿತರರು ಉಪಸ್ಥಿತರಿದ್ದರು.



ಶಿಲ್ಪಕಲಾ ಅಕಾಡೆಮಿ ಮತ್ತು ಗಾಂಧಿ ಸ್ಮಾರಕ ನಿಧಿ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ಮಹಾತ್ಮ ಗಾಂಧಿ ಸಿಮೆಂಟ್ ಶಿಲ್ಪಕಲಾ ಶಿಬಿರವನ್ನು ವಾರ್ತಾ ಸಚಿವ ಆರ್. ರೋಷನ್‌ಬೇಗ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷ ಮಹಾದೇವಪ್ಪ ಶಂಭುಲಿಂಗಪ್ಪಶೆಟ್ಟಿ ಹಾಗೂ ಚಿತ್ರಕಲಾ ಪರಿಷತ್‌ನ ಅಧ್ಯಕ್ಷ ಬಿ.ಎಲ್. ಶಂಕರ್ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ ಶನಿವಾರ 13 ಸೆಪ್ಟೆಂಬರ್ 2014



ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ನಗರದಲ್ಲಿಂದು ಆಯೋಜಿಸಿದ್ದ ಮಹಾತ್ಮಾಗಾಂಧಿ, ಸಿಮೆಂಟ್ ಶಿಲ್ಪಕಲಾ ಶಿಬಿರವನ್ನು ಸಚಿವ ರೋಷನ್ ಬೇಗ್ ಅವರು ಉದ್ಘಾಟಿಸಿದರು. ಡಾ. ಹೊ. ಶ್ರೀನಿವಾಸಯ್ಯ, ಮಹದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಮತ್ತಿತರರು ಇದ್ದಾರೆ.

ಶುಕ್ರವಾರ,
12 ಸೆಪ್ಟೆಂಬರ್ 2014

ಈ ಸಂಜೆ



ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿದ್ದ ಮಹಾತ್ಮ ಗಾಂಧೀ ಸಿಮೆಂಟ್ ಶಿಲ್ಪಕಲಾ ಶಿಬಿರವನ್ನು ವಾರ್ತಾ ಸಚಿವ ರೋಷನ್‌ಬೇಗ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ, ಕರ್ನಾಟಕ ಚಿತ್ರಕಲಾ ಪರಿಷತ್‌ನ ಅಧ್ಯಕ್ಷ ಬಿ.ಎಲ್. ಶಂಕರ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕ ದಯಾನಂದ ಉಪಸ್ಥಿತರಿದ್ದರು.

ಕರ್ನಾಟಕ

ಶುಕ್ರವಾರ, 12 ಸೆಪ್ಟೆಂಬರ್ 2014, ಮೈಸೂರು

# ಮಾನವೀಯ ಮೌಲ್ಯ ಇಳಿಮುಖ

**ಮೈಸೂರು:** ಒಂದೆಡೆ ನಾವು ಐಟಿ, ಬಿಟಿಯಲ್ಲಿ ಅಭಿವೃದ್ಧಿ ಸಾಧಿಸುತ್ತಿದ್ದರೂ ಇನ್ನೊಂದೆಡೆ ಮಾನವೀಯ ಮೌಲ್ಯಗಳು ಇಳಿಮುಖವಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಇವೆರಡರ ನಡುವೆ ಸಂಬಂಧ ಇದೆಯೇ ಎನ್ನುವುದರ ಬಗ್ಗೆ ಚಿಂತನೆ ನಡೆಸಬೇಕಿದೆ ಎಂದು ಮೈಸೂರು ವಿವಿ ಕುಲಪತಿ ಪ್ರೊ.ಕೆ. ಎಸ್. ರಂಗಪ್ಪ ಹೇಳಿದರು.

ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ, ಮೈಸೂರು ವಿವಿ ರಾಷ್ಟ್ರೀಯ ಸೇವಾ ಯೋಜನೆ, ಕಾಲೇಜು ಶಿಕ್ಷಣ ಇಲಾಖೆ ವತಿಯಿಂದ ಮೈಸೂರು ವಿವಿ ವ್ಯಾಪ್ತಿಯ ಆಯ್ದ ಶಿಕ್ಷಕರಿಗೆ ಸೆನೆಟ್ ಭವನದಲ್ಲಿ ಗುರುವಾರ ಹಮ್ಮಿಕೊಳ್ಳಲಾದ 'ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ-ಯುವ ಜನರಿಗೆ ಮಾನವೀಯ ಮೌಲ್ಯಗಳು-ಶಿಕ್ಷಕರ ಪಾತ್ರ' ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದರು.

ಮಾರ್ಟಿನ್ ಲೂಥರ್ ಕಿಂಗ್ ಅವರು 'ಗಾಂಧೀಜಿ ಅವರು ಜಗತ್ತಿಗೆ ಅನಿವಾರ್ಯ. ಅವರನ್ನು ಮರೆತರೆ ವಿಶ್ವ ವಿನಾಶದ ಅಂಚಿಗೆ ಹೋಗುತ್ತದೆ' ಎಂದು ಹೇಳಿದ್ದರು. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾ ಅವರು 'ಗಾಂಧೀಜಿ ಅವರ ತತ್ವಗಳಲ್ಲಿ ನಂಬಿಕೆ ಹೊಂದಿದ್ದಾರೆ. ಆದರೆ ನಮ್ಮ ದೇಶದಲ್ಲೇ ಜಗತ್ತಿಗೆ ಸಾಕಷ್ಟು ಕೊಡುಗೆ ನೀಡಿದ ಗಾಂಧೀಜಿ ಅವರನ್ನು ಮರೆಯಲಾಗುತ್ತಿದೆ ಎಂದು ವಿಷಾದಿಸಿದರು.

ಮೈಸೂರು ವಿವಿ ವತಿಯಿಂದ ಅಂದಾಜು 40 ಲಕ್ಷ ರೂ. ವೆಚ್ಚದಲ್ಲಿ ಎನ್‌ಎಸ್‌ಎಸ್ ಭವನ ನಿರ್ಮಿಸಲು ಸ್ಥಳ ಗುರುತಿಸಲಾಗಿದೆ ಎಂದರು.



ಮೈಸೂರು ವಿವಿ ವ್ಯಾಪ್ತಿಯ ಆಯ್ದ ಶಿಕ್ಷಕರಿಗೆ ಸೆನೆಟ್ ಭವನದಲ್ಲಿ ಗುರುವಾರ ಹಮ್ಮಿಕೊಳ್ಳಲಾದ ಕಾರ್ಯಾಗಾರವನ್ನು ಪ್ರೊ.ಕೆ.ಎಸ್.ರಂಗಪ್ಪ ಉದ್ಘಾಟಿಸಿದರು. ಡಾ.ವೂಡೇ ಪಿ ಕೃಷ್ಣ, ಡಾ.ಹೊ. ಶ್ರೀನಿವಾಸಯ್ಯ, ವೀರೇಶಾನಂದ ಸರಸ್ವತಿ ಸ್ವಾಮಿ, ಪ್ರೊ.ಬಿ.ಕೆ.ಶಿವಣ್ಣ,ಎ.ಎನ್.ಪೂಜಾರ್ ಭಾಗವಹಿಸಿದ್ದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ ಕೃಷ್ಣ ಅವರು ಮಾತನಾಡಿ, ಭಾರತ ಬಿಟ್ಟು ಗಾಂಧೀಜಿ, ಗಾಂಧೀಜಿ ಅವರನ್ನು ಬಿಟ್ಟು ಭಾರತವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವಾದ ಮಾತು. ಗಾಂಧೀಜಿ ಅವರ ಚಿಂತನೆಗಳನ್ನು ಇಂದಿನ ಪೀಳಿಗೆಗೆ ಪರಿಚಯಿಸುವಲ್ಲಿ ಶಿಕ್ಷಕರ ಪಾತ್ರ ಸಾಕಷ್ಟಿದೆ ಎಂದರು.

ಗಾಂಧೀಜಿ, ವಿವೇಕಾನಂದರು ದೇಶಕ್ಕೆ ಕೊಟ್ಟ ಬಲುದೊಡ್ಡ ಕೊಡುಗೆ ರಾಷ್ಟ್ರೀಯತೆಯಾಗಿದೆ. ಗಾಂಧೀಜಿ, ವಿವೇಕಾನಂದರ ಬಗ್ಗೆ ವಿದ್ಯಾರ್ಥಿಗಳು ತಿಳಿದುಕೊಳ್ಳದೆ ಹೋದರೆ ಅಂಥ ವಿದ್ಯಾಭ್ಯಾಸಕ್ಕೆ ಅರ್ಥವಿಲ್ಲ ಎಂದು ಅಭಿಪ್ರಾಯ ಪಟ್ಟರು.

ತುಮಕೂರು ರಾಮಕೃಷ್ಣ-ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮಿ, 'ಯುವ ಜನರಿಗೆ ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ' ಕುರಿತು ಪ್ರವಚನ ನೀಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ರಾ.ಸೇ.ಯೋ. ವಿಶ್ರಾಂತ ಸಂಯೋಜಕ ಪ್ರೊ.ಬಿ. ಕೆ.ಶಿವಣ್ಣ, ಯುವ ಜನಾಧಿಕಾರಿ ಎ.ಎನ್. ಪೂಜಾರ್, ರಾಜ್ಯ ಸಂಪರ್ಕಾಧಿಕಾರಿ ಡಾ.ಗಣನಾಥ ಶೆಟ್ಟಿ ಎಕ್ಕಾರ್, ವಿಶ್ರಾಂತ ಕುಲಪತಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್ ಇದ್ದರು.

ಉದ್ಘಾಟನಾ ಸಮಾರಂಭ ಬಳಿಕ ಗಾಂಧಿ ಅಧ್ಯಯನ ಕೇಂದ್ರಗಳ ಸ್ಥಾಪನೆ ಮತ್ತು ಅದರ ರೂಪುರೇಷೆಗಳ ಕುರಿತು ಚರ್ಚೆ, ಸಂವಾದ ನಡೆಯಿತು.

ಬೆಂಗಳೂರು | ಶುಕ್ರವಾರ, 12 ಸೆಪ್ಟೆಂಬರ್ 2014

## ಯುವಜನರಿಗೆ ಮಾನವೀಯ ಮೌಲ್ಯಗಳು, ಶಿಕ್ಷಕರ ಪಾತ್ರ ಕುರಿತ ಕಾರ್ಯಾಗಾರ

# ಮಾನವೀಯ ಮೌಲ್ಯ ಹೆಚ್ಚಿಸಿ: ಪ್ರೊ.ರಂಗಪ್ಪ

ಮೈಸೂರು: ಈಗಿನ ಕಾಲಘಟ್ಟದಲ್ಲಿ ಮಾನವೀಯ ಮೌಲ್ಯಗಳು ಕಡಿಮೆ ಆಗುತ್ತಿದ್ದು, ಈಗಿನ ಪೀಳಿಗೆಯಲ್ಲಿ ಮಾನವೀಯ ಮೌಲ್ಯ ಹೆಚ್ಚಿಸಬೇಕಾಗಿದೆ ಎಂದು ಮೈಸೂರು ವಿವಿ ಕುಲಪತಿ ಪ್ರೊ. ಕೆ.ಎಸ್. ರಂಗಪ್ಪ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಮೈಸೂರು ವಿವಿ ರಾಷ್ಟ್ರೀಯ ಸೇವಾ ಯೋಜನೆ ಮತ್ತು ಕಾಲೇಜು ಶಿಕ್ಷಣ ಇಲಾಖೆ ಸಂಯುಕ್ತವಾಗಿ ಮಾನಸಗಂಗೋತ್ರಿ ಸೆನೆಟ್ ಭವನದಲ್ಲಿ ಗುರುವಾರ ಆಯೋಜಿಸಿದ್ದ ಮೈಸೂರು ವಿವಿ ವ್ಯಾಪ್ತಿಯ ಆಯ್ದ ಅಧ್ಯಾಪಕರಿಗೆ ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ-ಯುವಜನರಿಗೆ ಮಾನವೀಯ ಮೌಲ್ಯಗಳು-ಶಿಕ್ಷಕರ ಪಾತ್ರ ಕುರಿತ ಕಾರ್ಯಾಗಾರವನ್ನು ಅವರು ಉದ್ಘಾಟಿಸಿ ಮಾತನಾಡಿದರು.

50 ವರ್ಷಗಳ ಹಿಂದಿದ್ದ ಗಾಂಧೀಜಿ ತತ್ವಗಳು ಹಾಗೂ ಮಾನವೀಯ ಮೌಲ್ಯಗಳು ಈಗ ತುಂಬಾ ಕಡಿಮೆ ಆಗಿದೆ. ಐಟಿ- ಬಿಟಿ ಉದ್ಯಮಗಳು ತತ್ವಗಳ ವಿರುದ್ಧ ದಿಕ್ಕಿನಲ್ಲಿ ಹೋಗುತ್ತಿವೆ. ಇದರಿಂದ ಮಾನವೀಯ ಮೌಲ್ಯಗಳು ಕಡಿಮೆ ಆಗಿದೆ. ಹೆಚ್ಚು ವಿದ್ಯೆ ಕಲಿತವರಲ್ಲಿ ಮಾನವೀಯ ಮೌಲ್ಯಗಳು ಸಹ ಹೆಚ್ಚಿರಬೇಕು. ಐಟಿ-ಬಿಟಿ ಜೊತೆಗೆ ಮೌಲ್ಯಗಳನ್ನು ತೆಗೆದುಕೊಂಡು ಹೋದಲ್ಲಿ ವಿಶ್ವದಲ್ಲಿ ಭಾರತವನ್ನು ಯಾರು ಹಿಂದಿಕ್ಕಲು ಸಾಧ್ಯವಿಲ್ಲ ಎಂದು ತಿಳಿಸಿದರು.

ಮಾರ್ಟಿನ್ ಲೂಥರ್, ಅಮೆರಿಕದ ಈಗಿನ ಅಧ್ಯಕ್ಷ ಒಬಾಮಾ ಅವರು ಮಹಾತ್ಮ ಗಾಂಧೀಜಿ ಅವರ ತತ್ವಗಳನ್ನು ಅರ್ಥ ಮಾಡಿಕೊಂಡು, ಗಾಂಧಿಯನ್ನು ವಿಶ್ವದ ನಾಯಕರು ಎಂದು ಕರೆದಿದ್ದಾರೆ. ವಿದೇಶಗಳಲ್ಲಿರುವ ಬಹುತೇಕ ವಿಶ್ವವಿದ್ಯಾಲಯಗಳು ಗಾಂಧೀಜಿ ಕುರಿತು ಪಾಠ ಪ್ರವಚನ ನೀಡುತ್ತಿವೆ. ಆದರೆ, ನಮ್ಮ ದೇಶದಲ್ಲಿರುವ ಕೆಲವು ವಿಶ್ವವಿದ್ಯಾಲಯಗಳಲ್ಲಿ ಇನ್ನೂ ಗಾಂಧೀಜಿ ಅಧ್ಯಯನ ಪೀಠವನ್ನು ಸಹ ಸ್ಥಾಪಿಸಿಲ್ಲ ಎಂದು ಅವರು ಬೇಸರ ವ್ಯಕ್ತಪಡಿಸಿದರು.

ಸಾನ್ನಿಧ್ಯ ವಹಿಸಿದ್ದ ತುಮಕೂರು ರಾಮಕೃಷ್ಣ- ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮೀಜಿ ಯುವ ಜನರಿಗೆ ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ ಕುರಿತು ಪ್ರವಚನ ನೀಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಅಧ್ಯಕ್ಷತೆ ವಹಿಸಿದ್ದರು. ಗೌರವ ಕಾರ್ಯದರ್ಶಿ ಪ್ರೊ.ಜಿ.ಬಿ.ಶಿವರಾಜು ಪ್ರಾಸ್ತಾವಿಕವಾಗಿ ಮಾತನಾಡಿದರು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ.ಪಿ.ಕೃಷ್ಣ ಎನ್‌ಎಸ್‌ಎಸ್ ವಿಶ್ರಾಂತ ಸಂಯೋಜನಾಧಿಕಾರಿ ಪ್ರೊ.ಬಿ.ಕೆ.ಶಿವಣ್ಣ, ಎನ್‌ಎಸ್‌ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ. ಗಣನಾಥಶೆಟ್ಟಿ ಎಕ್ಕಾರ್, ವಿಶ್ರಾಂತ ಕುಲಪತಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್, ಕಾಲೇಜು ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕ ಪ್ರೊ.ಸಿ.ಕೆ. ಮಹೇಶ್ವರಪ್ಪ ಇದ್ದರು.

ಮೈಸೂರು ವಿವಿ ಎನ್‌ಎಸ್‌ಎಸ್ ಕಾರ್ಯಕ್ರಮ ಸಂಯೋಜನಾಧಿಕಾರಿ ಡಾ.ಕೆ. ಕಾಳಚನ್ನೇಗೌಡ ಸ್ವಾಗತಿಸಿದರು. ಈ ಕಾರ್ಯಾಗಾರದಲ್ಲಿ ನೂರಾರು ಅಧ್ಯಾಪಕರು ಭಾಗವಹಿಸಿದ್ದರು.



ಮೈಸೂರು ವಿವಿ ವ್ಯಾಪ್ತಿಯ ಆಯ್ದ ಅಧ್ಯಾಪಕರಿಗೆ ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ- ಯುವಜನರಿಗೆ ಮಾನವೀಯ ಮೌಲ್ಯಗಳು- ಶಿಕ್ಷಕರ ಪಾತ್ರ ಕುರಿತ ಕಾರ್ಯಾಗಾರವನ್ನು ಕುಲಪತಿ ಪ್ರೊ.ಕೆ.ಎಸ್. ರಂಗಪ್ಪ ಉದ್ಘಾಟಿಸಿದರು. ಡಾ.ಮಲ್ಲೇಪುರಂ ಜಿ. ವೆಂಕಟೇಶ್, ಪ್ರೊ.ಬಿ.ಕೆ.ಶಿವಣ್ಣ, ಡಾ.ಹೊ. ಶ್ರೀನಿವಾಸಯ್ಯ, ವೀರೇಶಾನಂದ ಸರಸ್ವತಿ ಸ್ವಾಮೀಜಿ, ಡಾ.ವೂಡೇ.ಪಿ. ಕೃಷ್ಣ, ಪ್ರೊ.ಸಿ.ಕೆ. ಮಹೇಶ್ವರಪ್ಪ, ಡಾ. ಗಣನಾಥಶೆಟ್ಟಿ ಎಕ್ಕಾರ್ ಇದ್ದರು.

> ಮೈಸೂರು ವಿವಿ ರಾಷ್ಟ್ರೀಯ ಸೇವಾ ಯೋಜನೆ (ಎನ್‌ಎಸ್‌ಎಸ್) ಭವನ ನಿರ್ಮಿಸಲಾಗುವುದು. ಈ ಭವನಕ್ಕೆ 30 - 40 ಲಕ್ಷ ರು. ಅನುದಾನ ನೀಡಲಾಗುವುದು. ಭವನ ನಿರ್ಮಿಸಲು ಜಾಗ ಸಹ ಗುರುತಿಸಲಾಗಿದೆ.
>
> ■ ಪ್ರೊ.ಕೆ.ಎಸ್. ರಂಗಪ್ಪ, ಮೈಸೂರು ವಿವಿ ಕುಲಪತಿ

ವಿಜಯವಾಣಿ
● MYSORE

ಶುಕ್ರವಾರ
12 ಸೆಪ್ಟೆಂಬರ್ 2014

# ಗಂಗೋತ್ರಿಯಲ್ಲಿ ಎನ್‌ಎಸ್‌ಎಸ್ ಭವನ ನಿರ್ಮಾಣ: ಪ್ರೊ.ರಂಗಪ್ಪ

ಮೈಸೂರು: ವಿದ್ಯಾರ್ಥಿಗಳಲ್ಲಿ ಉತ್ತಮ ಮೌಲ್ಯಗಳನ್ನು ಬಿತ್ತಲು ಮಾನಸಗಂಗೋತ್ರಿಯಲ್ಲಿ ಎನ್‌ಎಸ್‌ಎಸ್ ಭವನ ನಿರ್ಮಾಣ ಮಾಡಲಾಗುವುದು ಎಂದು ಮೈಸೂರು ವಿಶ್ವವಿದ್ಯಾಲಯ ಕುಲಪತಿ ಪ್ರೊ. ಕೆ.ಎಸ್.ರಂಗಪ್ಪ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಮೈಸೂರು ವಿಶ್ವವಿದ್ಯಾಲಯದ ರಾಷ್ಟ್ರೀಯ ಸೇವಾ ಯೋಜನೆ, ಕಾಲೇಜು ಶಿಕ್ಷಣ ಇಲಾಖೆ ನಗರದ ಮಾನಸಗಂಗೋತ್ರಿಯ ಸೆನೆಟ್ ಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ 'ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ: ಯುವಜನರಿಗೆ ಮಾನವೀಯ ಮೌಲ್ಯಗಳು-ಶಿಕ್ಷಕರ ಪಾತ್ರ' ಕುರಿತ ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದ ಅವರು, ಎನ್‌ಎಸ್‌ಎಸ್ ಭವನ ನಿರ್ಮಾಣಕ್ಕೆ 40 ಲಕ್ಷ ರೂ. ಒದಗಿಸಲಾಗುವುದು. ಭವನಕ್ಕೆ ಈಗಾಗಲೇ ಜಾಗ ಗುರುತಿಸಲಾಗಿದೆ ಎಂದು ತಿಳಿಸಿದರು.



ನಗರದಲ್ಲಿ ಗುರುವಾರ ನಡೆದ ಕಾರ್ಯಾಗಾರಕ್ಕೆ ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಚಾಲನೆ ನೀಡಿದರು.

ವ್ಯಕ್ತಿ ಉನ್ನತ ಶಿಕ್ಷಣ ಪಡೆದಷ್ಟು ಆತನಲ್ಲಿ ಮೌಲ್ಯಗಳು ಹೆಚ್ಚಾಗಬೇಕು. ಆದರೆ ಪ್ರಸ್ತುತ ಉನ್ನತ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗುತ್ತಿದ್ದರೂ, ಮೌಲ್ಯಗಳ ಪ್ರಮಾಣದಲ್ಲಿ ಕುಸಿತ ಕಾಣುತ್ತಿದೆ. ವಿದ್ಯಾರ್ಥಿಗಳಲ್ಲಿ ಮಾನವೀಯ ಗುಣಗಳನ್ನು ಬೆಳೆಸಲು ಗಾಂಧಿ ಚಿಂತನೆ, ಎನ್‌ಎಸ್‌ಎಸ್ ಚಟುವಟಿಕೆಗಳ ಅವಶ್ಯಕ ಎಂದು ಅಭಿಪ್ರಾಯಪಟ್ಟರು.

ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ದೇಶ ಮುಂಚೂಣಿಯಲ್ಲಿದೆ. ಕೇವಲ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಮಾತ್ರ ಪ್ರಗತಿ ಸಾಧಿಸಿದರೆ ಸಾಲದು. ಇದರೊಂದಿಗೆ ಮಾನವೀಯ ಮೌಲ್ಯಗಳು ಕೂಡ ಹೆಚ್ಚಾಗಬೇಕು. ಮೌಲ್ಯ ಹಾಗೂ ಮಾಹಿತಿ ತಂತ್ರಜ್ಞಾನ ಜತೆಯಾಗಿ ಸಾಗಿದರೆ ದೇಶವನ್ನು ಹಿಂದಿಕ್ಕಲು ಯಾರಿಂದಲೂ ಸಾಧ್ಯವಿಲ್ಲ ಎಂದರು.

ಮೈಸೂರು ವಿವಿ ರಾಷ್ಟ್ರೀಯ ಸೇವಾ ಯೋಜನೆ ಕಾರ್ಯಕ್ರಮ ಸಂಯೋಜಕ ಡಾ.ಕೆ.ಕಾಳಚನ್ನೇಗೌಡ, ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಗೌರವ ಕಾರ್ಯದರ್ಶಿ ಪ್ರೊ.ಜಿ.ಬಿ. ಶಿವರಾಜು, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮೀಜಿ, ರಾಷ್ಟ್ರೀಯ ಸೇವಾ ಯೋಜನೆಯ ರಾಜ್ಯ ಸಂಪರ್ಕಾಧಿಕಾರಿ ಡಾ. ಗಣನಾಥ ಶೆಟ್ಟಿ ಎಕ್ಕಾರ್, ವಿಶ್ರಾಂತ ಸಂಯೋಜನಾಧಿಕಾರಿ ಪ್ರೊ.ಬಿ.ಕೆ. ಶಿವಣ್ಣ ಹಾಜರಿದ್ದರು.

ಮೈಸೂರು ಮಿತ್ರ

ಶುಕ್ರವಾರ ೧೨ ಸೆಪ್ಟೆಂಬರ್ ೨೦೧೪

# ಐಟಿಯೊಂದಿಗೆ ಮಾನವೀಯ ಮೌಲ್ಯ ಬೆರೆತರೆ ದೇಶ ಮತ್ತಷ್ಟು ಅಭಿವೃದ್ಧಿ

## ಮೈಸೂರು ವಿವಿ ಕುಲಪತಿ ಪ್ರೊ. ರಂಗಪ್ಪ ಅಭಿಮತ

ಮೈಸೂರು, ಸೆ.೧೧(ನಕು)- ಮಾಹಿತಿ ತಂತ್ರಜ್ಞಾನ(ಐಟಿ)ದೊಂದಿಗೆ ಮಾನವೀಯ ಮೌಲ್ಯಗಳನ್ನು ಎತ್ತರಕ್ಕೆ ಕೊಂಡೊಯ್ದರೆ ದೇಶ ಇನ್ನಷ್ಟು ಅಭಿವೃದ್ಧಿಯಾಗಲಿದೆ ಎಂದು ಮೈಸೂರು ವಿವಿ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಹೇಳಿದರು.

'ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ- ಯುವ ಜನರಿಗೆ ಮಾನವೀಯ ಮೌಲ್ಯಗಳು- ಶಿಕ್ಷಕರ ಪಾತ್ರ' ವಿಷಯ ಕುರಿತು ಬೆಂಗಳೂರಿನ ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಮೈಸೂರು ವಿವಿ ರಾಷ್ಟ್ರೀಯ ಸೇವಾ ಯೋಜನೆ ಹಾಗೂ ಕಾಲೇಜು ಶಿಕ್ಷಣ ಇಲಾಖೆ ಸಂಯುಕ್ತಾಶ್ರಯದಲ್ಲಿ ಮೈಸೂರು ವಿವಿ ವ್ಯಾಪ್ತಿಯ ಆಯ್ದ ಶಿಕ್ಷಕರಿಗಾಗಿ ಮಾನಸಗಂಗೋತ್ರಿಯ ಸೆನೆಟ್ ಭವನದಲ್ಲಿ, ಇಂದು ಏರ್ಪಡಿಸಿದ್ದ ಕಾರ್ಯಾಗಾರವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಮಾಹಿತಿ ತಂತ್ರಜ್ಞಾನ ಹಾಗೂ ಮಾನವೀಯ ಮೌಲ್ಯಗಳು ತದ್ವಿರುದ್ಧವಾಗಿ ಕ್ರಮಿಸುತ್ತಿವೆ. ಹೀಗಾಗಿ ಕಳೆದ ಎರಡು ದಶಕಗಳಿಂದ ತಂತ್ರಜ್ಞಾನ ಕ್ಷೇತ್ರ ಪ್ರಗತಿ ಸಾಧಿಸುತ್ತಿವೆ. ಇತ್ತ ಮಾನವೀಯ ಮೌಲ್ಯಗಳು ಮಾತ್ರ ಹಂತ ಹಂತವಾಗಿ ಕುಸಿಯತೊಡಗಿವೆ. ಇದು ಆತಂಕಕಾರಿಯಾದ ಬೆಳವಣಿಗೆಯಾಗಿದ್ದು, ಮುಂದಿನ ದಿನಗಳಲ್ಲಿ ಇದರಿಂದ ಭಾರಿ ಆಘಾತ ಕಾದಿದೆ ಎಂದು ಕಳವಳ ವ್ಯಕ್ತಪಡಿಸಿದರು.

ರಾಜ್ಯದ ಎಲ್ಲಾ ವಿವಿ ಹಾಗೂ ಶಿಕ್ಷಣ ಸಂಸ್ಥೆಗಳು ಈ ಬಗ್ಗೆ ಎಚ್ಚೆತ್ತುಕೊಂಡು ಇಂದಿನ ಯುವ ಪೀಳಿಗೆಗೆ ಮಾನವೀಯ ಮೌಲ್ಯಗಳ ಬಗ್ಗೆ ತಿಳಿಸಿಕೊಡುವ ಮೂಲಕ ಈ ಅಸಮಾನತೆಯನ್ನು ತಡಗಟ್ಟಬಹುದಾಗಿದೆ ಎಂದ ಅವರು, ಇಂದು ವಿದೇಶಗಳಲ್ಲಿ ಮಹಾತ್ಮ ಗಾಂಧೀಜಿ ಅವರ ಮೌಲ್ಯ ಮತ್ತು ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಿದ್ದಾರೆ. ಹೊರ ದೇಶಗಳಲ್ಲಿ ಗಾಂಧೀಜಿ ಪೀಠ, ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಿ ಅಧ್ಯಯನ ಮಾಡುತ್ತಿದ್ದಾರೆ. ಆದರೆ ನಮ್ಮ ದೇಶದ ಬಹುತೇಕ ವಿವಿಗಳಲ್ಲಿ ಗಾಂಧೀಜಿ ಅಧ್ಯಯನ ಪೀಠಗಳೇ ಇಲ್ಲವಾಗಿರುವುದು ನಮ್ಮ ದೌರ್ಭಾಗ್ಯವಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಎನ್‌ಎಸ್‌ಎಸ್ ಭವನ : ಗಾಂಧೀಜಿ ಅವರ ವಿಚಾರಧಾರೆಗಳನ್ನು ಹಂಚುತ್ತಿರುವ ರಾಷ್ಟ್ರೀಯ ಸೇವಾ ಯೋಜನೆ ಬಗ್ಗೆ ಮೆಚ್ಚುಗೆ ನುಡಿಗಳನ್ನಾಡಿದ ಪ್ರೊ.ರಂಗಪ್ಪ, ಎನ್‌ಎಸ್‌ಎಸ್ ಭವನ ನಿರ್ಮಾಣಕ್ಕೆ ಈಗಾಗಲೇ ಜಾಗ ಗುರುತಿಸಲಾಗಿದೆ. ಹೀಗಾಗಿ ಮೈಸೂರು ವಿವಿ ವತಿಯಿಂದ ಭವನ ನಿರ್ಮಾಣಕ್ಕಾಗಿ ೪೦ ಲಕ್ಷ ರೂ. ನೀಡುವುದಾಗಿ ಭರವಸೆ ನೀಡಿದರು.

ಕಾರ್ಯಕ್ರಮದಲ್ಲಿ ತುಮಕೂರಿನ ಶ್ರೀ ರಾಮಕೃಷ್ಣ ಆಶ್ರಮದ ಅಧ್ಯಕ್ಷ ಶ್ರೀ ವೀರೇಶಾನಂದ ಸ್ವಾಮೀಜಿ ಪ್ರವಚನ ನೀಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೋ.ಶ್ರೀನಿವಾಸಯ್ಯ, ವಿಶ್ರಾಂತ ಸಂಯೋಜನಾಧಿಕಾರಿ ಪ್ರೊ.ಬಿ.ಕೆ.ಶಿವಣ್ಣ, ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೆ.ಪಿ.ಕೃಷ್ಣ, ಗೌರವ ಕಾರ್ಯದರ್ಶಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್, ಎನ್‌ಎಸ್‌ಎಸ್, ರಾಜ್ಯ ಸಂಪರ್ಕಾಧಿಕಾರಿ ಡಾ.ಗಣನಾಥ ಶೆಟ್ಟಿ ಎಕ್ಕಾರ್, ಕಾಲೇಜು ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕ ಪ್ರೊ.ಸಿ.ಕೆ.ಮಹೇಶ್ವರಪ್ಪ, ಕಾರ್ಯಕ್ರಮ ಸಂಯೋಜನಾಧಿಕಾರಿ ಡಾ.ಕೆ.ಕಾಳಚನ್ನೇಗೌಡ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಜಿ.ಬಿ. ಶಿವರಾಜು ಸೇರಿದಂತೆ ಇತರರು ಹಾಜರಿದ್ದರು.



ಮೈಸೂರು ವಿವಿ ವ್ಯಾಪ್ತಿಯ ಆಯ್ದ ಶಿಕ್ಷಕರಿಗಾಗಿ ಗುರುವಾರ ಏರ್ಪಡಿಸಿದ್ದ ಕಾರ್ಯಾಗಾರವನ್ನು ಮೈಸೂರು ವಿವಿ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ (ಎಡದಿಂದ) ಡಾ.ಮಲ್ಲೇಪುರಂ ಜಿ.ವೆಂಕಟೇಶ್, ಪ್ರೊ.ಬಿ.ಕೆ.ಶಿವಣ್ಣ, ಡಾ.ಹೊ.ಶ್ರೀನಿವಾಸಯ್ಯ, ಶ್ರೀ ವೀರೇಶಾನಂದ ಸ್ವಾಮೀಜಿ, ಡಾ.ವೂಡೆ.ಪಿ.ಕೃಷ್ಣ, ಪ್ರೊ.ಸಿ.ಕೆ.ಮಹೇಶ್ವರಪ್ಪ, ಡಾ.ಗಣನಾಥ ಶೆಟ್ಟಿ ಎಕ್ಕಾರ್, ಡಾ.ಕೆ.ಕಾಳಚನ್ನೇಗೌಡ ಅವರನ್ನು ಕಾಣಬಹುದು.

# 'ವಿದ್ಯಾವಂತರಾಗದ ಅಕ್ಷರವಂತರು'

ಪ್ರಜಾವಾಣಿ ವಾರ್ತೆ



ಮೈಸೂರಿನ ಸೆನೆಟ್ ಭವನದಲ್ಲಿ ಗುರುವಾರ 'ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ– ಯುವಜನರಿಗೆ ಮಾನವೀಯ ಮೌಲ್ಯಗಳು– ಶಿಕ್ಷಕರ ಪಾತ್ರ' ಕುರಿತ ಕಾರ್ಯಾಗಾರವನ್ನು ಕುಲಪತಿ ಕೆ.ಎಸ್. ರಂಗಪ್ಪ ಉದ್ಘಾಟಿಸಿದರು. ಗಾಂಧೀ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್, ಎನ್ಎಸ್ಎಸ್ ನಿವೃತ್ತ ಸಂಯೋಜನಾಧಿಕಾರಿ ಪ್ರೊ.ಬಿ.ಕೆ. ಶಿವಣ್ಣ, ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ, ತುಮಕೂರಿನ ರಾಮಕೃಷ್ಣ–ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕಾಲೇಜು ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕ ಪ್ರೊ.ಸಿ.ಕೆ. ಮಹೇಶ್ವರಪ್ಪ ಎನ್ಎಸ್ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ.ಗಣನಾಥ ಶೆಟ್ಟಿ ಎಕ್ಕಾರ್ ಇದ್ದಾರೆ

ಮೈಸೂರು: 'ಇಂದಿನ ವಿದ್ಯಾರ್ಥಿಗಳು ಅಕ್ಷರವಂತರಾಗುತ್ತಿದ್ದಾರೆ ಹೊರತು ವಿದ್ಯಾವಂತರಾಗುತ್ತಿಲ್ಲ. ಜತೆಗೆ, ದುಡ್ಡು ಸಂಪಾದನೆಯೇ ಮುಖ್ಯವಾಗುತ್ತಿದೆ. ಆದರೆ, ಹೇಗೆ ಬದುಕಬೇಕೆಂಬುದು ಇಂದಿನ ಯುವಪೀಳಿಗೆಗೆ ಗೊತ್ತಿಲ್ಲ' ಎಂದು ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ ಕಳವಳ ವ್ಯಕ್ತಪಡಿಸಿದರು.

ನಗರದ ಮಾನಸಗಂಗೋತ್ರಿ ಸೆನೆಟ್ ಭವನದಲ್ಲಿ ಗುರುವಾರ ಹಮ್ಮಿಕೊಂಡಿದ್ದ ಮೈಸೂರು ವಿವಿ ವ್ಯಾಪ್ತಿಯ ಆಯ್ದ ಶಿಕ್ಷಕರ 'ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ– ಯುವಜನರಿಗೆ ಮಾನವೀಯ ಮೌಲ್ಯಗಳು– ಶಿಕ್ಷಕರ ಪಾತ್ರ' ಕುರಿತ ಕಾರ್ಯಾಗಾರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು.

'ಪ್ರತಿ ವರ್ಷ ಈ ದೇಶದಲ್ಲಿ 20.6 ಲಕ್ಷ ಆತ್ಮಹತ್ಯೆಗಳಾಗುತ್ತಿವೆ. ಜಗತ್ತಿಗೆ ಈ ದೇಶ ಆತ್ಮಹತ್ಯೆಗಳ ರಾಜಧಾನಿಯಾಗಿದೆ. ನಮ್ಮ ಹಿರಿಯರು ಅಕ್ಷರವಂತರಾಗಿರಲಿಲ್ಲ. ಆದರೆ, ವಿದ್ಯಾವಂತರಾಗಿದ್ದರು. ಹೀಗಾಗಿ, ಅವರಿಗೆ ಹೇಗೆ ಬದುಕಬೇಕೆಂಬುದು ಗೊತ್ತಿತ್ತು. ಪರಸ್ಪರ ಪ್ರೀತಿ, ಗೌರವ ಕೊಡದೆ, ಯಾರೊಂದಿಗೂ ಬೆರೆಯದೆ, ನಗದೆ ಮಕ್ಕಳು ಬೆಳೆಯುತ್ತಿದ್ದಾರೆ. ಬೆಂಗಳೂರಿನಲ್ಲಿ 70 ಲಾಫಿಂಗ್ ಕ್ಲಬ್‌ಗಳಿವೆ ಎನ್ನುವುದು ಸೋಜಿಗ. ಇದಕ್ಕಾಗಿ ಶಾಲೆ, ಕಾಲೇಜುಗಳಲ್ಲಿ ಹೇಗೆ ಬದುಕಬೇಕು ಜತೆಗೆ, ಬದುಕುವ ಧೈರ್ಯವನ್ನು ಹೇಳಿಕೊಡಬೇಕು' ಎಂದು ಸಲಹೆ ನೀಡಿದರು.

ಗಾಂಧಿ ಶಾಂತಿ ಪ್ರಶಸ್ತಿ: 'ಮಹಾತ್ಮ ಗಾಂಧಿ ವಿಚಾರಧಾರೆಗಳನ್ನು ಅನುಷ್ಠಾನಕ್ಕೆ ತಂದವರಿಗೆ ಪ್ರತಿ ವರ್ಷ ಅಕ್ಟೋಬರ್ 2ರಂದು ಗಾಂಧಿ ಶಾಂತಿ ಪ್ರಶಸ್ತಿ ನೀಡಲು ರಾಜ್ಯ ಸರ್ಕಾರ ಮುಂದಾಗಿದೆ. ಇದಕ್ಕಾಗಿ ₹ 10 ಲಕ್ಷ ತೆಗೆದಿರಿಸಿದ್ದು, ₹ 5 ಲಕ್ಷ ನಗದನ್ನು ಪ್ರಶಸ್ತಿಯಾಗಿ ನೀಡಲಾಗುತ್ತದೆ' ಎಂದು ಅವರು ತಿಳಿಸಿದರು.

ಕಾರ್ಯಾಗಾರವನ್ನು ಉದ್ಘಾಟಿಸಿದ ಮೈಸೂರು ವಿವಿ ಕುಲಪತಿ ಡಾ.ಕೆ.ಎಸ್. ರಂಗಪ್ಪ ಮಾತನಾಡಿ, 'ಮೈಸೂರು ವಿವಿಯಲ್ಲಿ ₹ 30–40 ಲಕ್ಷ ವೆಚ್ಚದಲ್ಲಿ ಎನ್ಎಸ್ಎಸ್ ಭವನ ನಿರ್ಮಾಣ ಕಾಮಗಾರಿಯನ್ನು ಅತಿ ಶೀಘ್ರದಲ್ಲಿ ಆರಂಭಿಸಲಾಗುತ್ತದೆ' ಎಂದು ಪ್ರಕಟಿಸಿದರು.

ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, 'ಗಾಂಧಿ ಜನರ ನಡುವೆ ಇದ್ದು, ಯಾವ ಅಧಿಕಾರ, ಹಣ ಬಯಸದೆ ರಚನಾತ್ಮಕ ಕಾರ್ಯಗಳನ್ನು ರೂಪಿಸಿದರು. ಗಾಂಧಿ ಬಿಟ್ಟು ಭಾರತ ಇಲ್ಲ. ಹಾಗೆಯೇ, ಭಾರತ ಬಿಟ್ಟು ಗಾಂಧಿ ಇಲ್ಲ' ಎಂದು ಗಾಂಧಿ ವ್ಯಕ್ತಿತ್ವ ಬಣ್ಣಿಸಿದರು.

'ಯುವಜನರಿಗೆ ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ' ಕುರಿತು ತುಮಕೂರಿನ ರಾಮಕೃಷ್ಣ–ವಿವೇಕಾನಂದ ಆಶ್ರಮದ ಅಧ್ಯಕ್ಷ ವೀರೇಶಾನಂದ ಸರಸ್ವತಿ ಸ್ವಾಮೀಜಿ ಉಪನ್ಯಾಸ ನೀಡಿದರು.

ಗಾಂಧೀ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ.ಮಲ್ಲೇಪುರಂ ಜಿ. ವೆಂಕಟೇಶ್, ಎನ್ಎಸ್ಎಸ್ ನಿವೃತ್ತ ಸಂಯೋಜನಾಧಿಕಾರಿ ಪ್ರೊ.ಬಿ.ಕೆ. ಶಿವಣ್ಣ, ಎನ್ಎಸ್ಎಸ್ ರಾಜ್ಯ ಸಂಪರ್ಕಾಧಿಕಾರಿ ಡಾ.ಗಣನಾಥ ಶೆಟ್ಟಿ ಎಕ್ಕಾರ್, ಕಾಲೇಜು ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕ ಪ್ರೊ.ಸಿ.ಕೆ. ಮಹೇಶ್ವರಪ್ಪ ಹಾಜರಿದ್ದರು. ಸಿದ್ಧಾರ್ಥನಗರದ ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕ ಪ್ರಸನ್ನಕುಮಾರ್ ಕಾರ್ಯಕ್ರಮ ನಿರ್ವಹಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಮೈಸೂರು ವಿವಿಯ ರಾಷ್ಟ್ರೀಯ ಸೇವಾ ಯೋಜನೆ ಮತ್ತು ಕಾಲೇಜು ಶಿಕ್ಷಣ ಇಲಾಖೆ ಆಶ್ರಯದಲ್ಲಿ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು.

ವಿಜಯವಾಣಿ 25.8.2014

# ಗಾಂಧೀಜಿಗೆ ಪ್ರೇರಣೆ ನೀಡಿದ ಭಗವದ್ಗೀತೆ



'ಗಾಂಧೀಜಿಗೆ ಪ್ರೇರಣೆ ನೀಡಿದ ಕೃತಿಗಳು' ಕುರಿತ ವಿಚಾರಸಂಕಿರಣವನ್ನು ಡಾ. ಕೆ.ಜಿ. ಸುಬ್ರಾಯ ಶರ್ಮಾ ಭಾನುವಾರ ಉದ್ಘಾಟಿಸಿದರು. ಡಾ. ಹೊ. ಶ್ರೀನಿವಾಸಯ್ಯ, ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

**ಬೆಂಗಳೂರು:** ಮಹಾತ್ಮಾಗಾಂಧೀಜಿ ಯಾರಿಂದಲೂ ಏನನ್ನೂ ನಿರೀಕ್ಷೆ ಮಾಡದೆ ಲೋಕಕಲ್ಯಾಣಕ್ಕಾಗಿ ದುಡಿದರು. ಖ್ಯಾತಿ, ಜನಪ್ರಿಯತೆ, ಸ್ವಾರ್ಥಕ್ಕಾಗಿ ಹೋರಾಟ ಮಾಡಲಿಲ್ಲ ಎಂದು ವಿದ್ವಾಂಸ ಡಾ. ಕೆ.ಜಿ. ಸುಬ್ರಾಯ ಶರ್ಮಾ ಹೇಳಿದರು.

ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿಯಾನ ಪಬ್ಲಿಷಿಂಗ್ ಹೌಸ್ ಸಹಯೋಗದಲ್ಲಿ ಆಯೋಜಿಸಿದ್ದ 'ಮಹಾತ್ಮಗಾಂಧೀಜಿಯವರಿಗೆ ಪ್ರೇರಣೆ ನೀಡಿದ ಕೃತಿಗಳು' ಕುರಿತ ವಿಚಾರಸಂಕಿರಣದಲ್ಲಿ ಉಪನ್ಯಾಸ ನೀಡಿದರು.

ವಿಶಾಲ ಮನೋಭಾವ ಹೊಂದಿದ್ದ ಗಾಂಧೀಜಿ, ಭಗವದ್ಗೀತೆ ಪಠಣ ಮಾಡದೆ ಊಟ ಮತ್ತು ನಿದ್ರೆ ಮಾಡುತ್ತಿರಲಿಲ್ಲ. ಗೀತೆ, ಉಪನಿಷತ್ತುಗಳ ಅಧ್ಯಯನದಿಂದ ಸತ್ಯಸಂಧ, ಧೀಮಂತ ವ್ಯಕ್ತಿಯಾಗಿ ಬೆಳೆದು ನಿಂತರು. ಸದ್ಗುಣಗಳನ್ನು ಬೆಳೆಸಿಕೊಂಡ ಹೃದಯ ಶ್ರೀಮಂತರಾದರೇ ವಿನಃ ಕರೆನ್ಸಿ ನೋಟುಗಳಿಂದ ಶ್ರೀಮಂತ ಎನಿಸಿಕೊಳ್ಳಲಿಲ್ಲ ಎಂದರು.

> ಭಗವದ್ಗೀತೆ ಮತ್ತು ಬೈಬಲ್ ವಿಶ್ವಪ್ರಸಿದ್ಧ ಗ್ರಂಥಗಳು. ಕ್ರೈಸ್ತರು ಹಣ ಸೇರಿಸಿಕೊಂಡು ಬೈಬಲ್ ಗ್ರಂಥವನ್ನು ವಿಶ್ವದೆಲ್ಲೆಡೆ ಪ್ರಚಾರ ಮಾಡಿದರು. ಆದರೆ, ಭಾರತೀಯರಿಗೆ ಭಕ್ತಿ ಮತ್ತು ಆಸಕ್ತಿ ಇಲ್ಲದಿರುವುದರಿಂದ ಭಗವದ್ಗೀತೆ ಪ್ರಚಾರವಾಗಲಿಲ್ಲ. ಆದರೂ ಗೀತೆ ಸ್ವಸಾಮರ್ಥ್ಯದಿಂದ ವಿಶ್ವಮಟ್ಟಕ್ಕೆ ಬೆಳೆಯಿತು. ಆದರೆ, ಗ್ರಂಥ ಖರೀದಿಸಲು ಹಿಂಜರಿಯುವ ಭಾರತೀಯರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.
>
> ಡಾ. ಸುಬ್ರಾಯ ಶರ್ಮಾ ವಿದ್ವಾಂಸ

**ಭಗವದ್ಗೀತೆ ಪ್ರತಿಯೊಬ್ಬರ ಆಸ್ತಿ:** ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಮಾತನಾಡಿ, ಭಗವದ್ಗೀತೆಯಿಂದ ಗಾಂಧೀಜಿ ಶಾಂತಿ, ಧೈರ್ಯ, ತ್ಯಾಗ ಹಾಗೂ ಹೋರಾಟದ ಮನೋಭಾವ ಬೆಳೆಸಿಕೊಂಡಿದ್ದರು ಎಂದರು.

ಡಾ. ಮಲ್ಲೇಪುರಂ ವೆಂಕಟೇಶ್, ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಹೊಸದಿಗಂತ 25-8-2014

# ಭಗವದ್ಗೀತೆ ಜಗತ್ತಿನ ಸರ್ವಧರ್ಮ ಸಮನ್ವಯ ಗ್ರಂಥ: ಸುಬ್ರಾಯಶರ್ಮ

ಬೆಂಗಳೂರು: ಭಗವದ್ಗೀತೆ ಇಡೀ ಜಗತ್ತಿಗೆ ಸರ್ವಧರ್ಮ ಸಮನ್ವಯ ಗ್ರಂಥ ಎಂದು ವೇದಾಂತ ವಿದ್ವಾಂಸ ಡಾ.ಕೆ.ಜಿ. ಸುಬ್ರಾಯಶರ್ಮ ಅಭಿಪ್ರಾಯಪಟ್ಟರು.

ಮಹಾತ್ಮ ಗಾಂಧೀಜಿಯವರಿಗೆ ಪ್ರೇರಣೆ ನೀಡಿದ ಕೃತಿಗಳು ಎಂಬ ವಿಚಾರ ಕುರಿತು ಗಾಂಧಿಯನ್ ಪಬ್ಲಿಷಿಂಗ್ ಹೌಸ್ ವತಿಯಿಂದ ನಗರದ ಗಾಂಧಿ ಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ವಿಚಾರ ಸಂಕಿರಣ ಉದ್ಘಾಟಿಸಿ ಅವರು ಮಾತನಾಡಿದರು. ಜೀವನದಲ್ಲಿ ಬರುವ ಎಲ್ಲ ಸಮಸ್ಯೆಗಳಿಗೂ ಭಗವದ್ಗೀತೆಯಲ್ಲಿ ಪರಿಹಾರವಿದೆ. ಜೊತೆಗೆ ಪ್ರೀತಿ, ತ್ಯಾಗದ ಸಂದೇಶವನ್ನೂ ಭಗವದ್ಗೀತೆ ಜಗತ್ತಿಗೆ ನೀಡಿದೆ. ಅದರಲ್ಲಿನ ಸಾರಾಂಶವನ್ನು ಪ್ರತಿಯೊಬ್ಬರೂ ಅರಿಯಬೇಕು. ಆಗ ಮಾತ್ರ ಸಮರಸ ಜೀವನ ಸಾಧ್ಯ. ಜೀವನದ ಮೌಲ್ಯಗಳು ಭಗವದ್ಗೀತೆಯಲ್ಲಿ ಅಡಕವಾಗಿರುವುದರಿಂದಲೇ ಅದು ಜಗತ್ತಿಗೆ ಸರ್ವಧರ್ಮ ಸಮನ್ವಯ ಗ್ರಂಥ ಎಂದು ಶ್ಲಾಘಿಸಿದರು.

### ಬೈಬಲ್-ಗೀತೆ ನಡುವೆ ಮಾರುಕಟ್ಟೆ ಸ್ಪರ್ಧೆ

ಭಗವದ್ಗೀತೆ ಇಂದು ಜಗತ್ತಿನ ಅನೇಕ ಭಾಷೆಗಳಲ್ಲಿ ಅನುವಾದಗೊಂಡಿದೆ. ಭಗವದ್ಗೀತೆಯ ಬಗ್ಗೆ ನಾವೆಲ್ಲರೂ ಹೆಮ್ಮೆಪಡಬೇಕು. ಆದರೆ, ಭಗವದ್ಗೀತೆ ಮತ್ತು ಬೈಬಲ್ ಗ್ರಂಥಗಳು ಮಾರುಕಟ್ಟೆಯಲ್ಲಿ ಪರಸ್ಪರ ಸ್ಪರ್ಧಿಗಳಾಗಿವೆ. ಬೈಬಲ್ ಗ್ರಂಥವನ್ನು ಮುದ್ರಿಸಲು ಆ ಧರ್ಮದವರ ಬಳಿ ಸಾಕಷ್ಟು ಹಣವಿದೆ. ನಮ್ಮಲ್ಲಿ ಮುದ್ರಣವಾಗಿರುವ ಪುಸ್ತಕವನ್ನು ಹಣ ಕೊಟ್ಟು ಕೊಳ್ಳುವ ಮನಸ್ಥಿತಿಯಾಗಲೀ, ಅದನ್ನು ಓದುವ ಆಸಕ್ತಿಯಾಗಲೀ ನಮ್ಮಲ್ಲಿಲ್ಲ. ಬೇರೆ ವಸ್ತುಗಳನ್ನು ಕಣ್ಣು ಮುಚ್ಚಿ ಖರೀದಿ ಮಾಡುತ್ತೇವೆ. ಜೀವನಮೌಲ್ಯವನ್ನು ತಿಳಿಸಿಕೊಡುವ ಭಗವದ್ಗೀತೆಯಂತಹ ಗ್ರಂಥವನ್ನು ಕೊಂಡುಕೊಳ್ಳಲು ಹಿಂದೆ ಮುಂದೆ ನೋಡುತ್ತೇವೆ ಎಂದು ಬೇಸರ ವ್ಯಕ್ತಪಡಿಸಿದರು.

ಮಹಾತ್ಮ ಗಾಂಧೀಜಿ ಅವರು ಭಗವದ್ಗೀತೆ ಮತ್ತು ಉಪನಿಷತ್‌ಗಳನ್ನು ಓದಿ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅಹಿಂಸೆ ಮತ್ತು ಕರ್ತವ್ಯ ನಿಷ್ಠೆಯಿಂದ ವಿಶ್ವವಿಖ್ಯಾತರಾದರು. ಮಹಾತ್ಮ ಗಾಂಧಿಯವರು ಸೂರ್ಯನಂತೆ ಕೆಲಸ ಮಾಡಿದರು. ಎಲ್ಲಿಯೂ ತನಗಾಗಿ ಏನನ್ನೂ ಮಾಡಿಕೊಳ್ಳದ ಧೀಮಂತ ವ್ಯಕ್ತಿತ್ವ ಹೊಂದಿದ್ದರು. ಸೂರ್ಯ ಹೇಗೆ ಅಪೇಕ್ಷೆ ಇಲ್ಲದೆ ತನ್ನ ಪಾಡಿಗೆ ತಾನು ಇಡೀ ಜಗತ್ತಿಗೆ ಸಮಯಕ್ಕೆ ಸರಿಯಾಗಿ ಕೆಲಸ ಮಾಡುತ್ತಿದ್ದಾನೋ, ಹಾಗೆಯೇ ಗಾಂಧೀಜಿ ಅವರು ಸರ್ವೋದಯ ಸಂಸ್ಥೆಯನ್ನು ಕಟ್ಟಿದರು. ಬಡತನದಲ್ಲಿ ಹುಟ್ಟಿ ಬಡತನದಲ್ಲೇ ಅಂತ್ಯ ಕಂಡ ಗಾಂಧೀಜಿ ಅವರು ಎಂದಿಗೂ ತಮ್ಮ ಜೀವನದಲ್ಲಿ ಆಸೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿರಲಿಲ್ಲ. ಜೈಲಿನಲ್ಲಿದ್ದಾಗಲೂ ಗಾಂಧೀಜಿ ಅವರು ಭಗವದ್ಗೀತೆ ಮತ್ತು ಉಪನಿಷತ್ತುಗಳನ್ನು ಓದುತ್ತಿದ್ದರು. ಅಷ್ಟರಮಟ್ಟಿಗೆ ಭಗವದ್ಗೀತೆ ಪ್ರಭಾವ ಬೀರಿತ್ತು ಎಂದರು.

### ಭಾರತದ ಪ್ರತಿರೂಪವೇ ಗಾಂಧಿ

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ಗಾಂಧೀಜಿ ಅವರು ಅನ್ ಟು ದಿ ಲಾಸ್ಟ್ ಪುಸ್ತವನ್ನು ಓದಿ ತಮ್ಮ ಆಲೋಚನಾ ಕ್ರಮವನ್ನು ಬದಲಾಯಿಸಿಕೊಂಡಿದ್ದರು. ಆ ಪುಸ್ತವನ್ನು ಓದಿದ ಮೇಲೆ ಯಾವಗಲೂ ಹೇಳುತ್ತಿದ್ದ ಮಾತೆಂದರೆ, ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕರ ಅಭಿಪ್ರಾಯವನ್ನು ಮೂಡಿಸುವ ಪ್ರಯತ್ನ ಮಾಡಬೇಕೆಂಬುದು. ಅವರು ಭಾರತದ ಪ್ರತಿರೂಪವಾಗಿದ್ದರು ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಗಾಂಧಿಭವನದ ಅಧ್ಯಕ್ಷ ಹೋ. ಶ್ರೀನಿವಾಸಯ್ಯ, ಗಾಂಧಿಭವನದ ಕಾರ್ಯದರ್ಶಿ ಜಿ.ಬಿ.ಶಿವರಾಜ್, ಗಾಂಧಿ ಶಾಂತಿ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ. ಮಲ್ಲೆಪುರ ಜಿ. ವೆಂಕಟೇಶ್, ಗಾಂಧಿಯಾನ ಪಬ್ಲಿಷಿಂಗ್ ಹೌಸ್‌ನ ನಿರ್ದೇಶಕ ಗಾಂಧಿಯಾನ ಚಂದ್ರು ಉಪಸ್ಥಿತರಿದ್ದರು.



ಗಾಂಧಿಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ವೇದಾಂತ ವಿದ್ವಾಂಸ ಡಾ.ಕೆ.ಜಿ. ಸುಬ್ರಾಯ ಶರ್ಮ, ಗಾಂಧಿ ಭವನದ ಅಧ್ಯಕ್ಷ ಹೋ. ಶ್ರೀನಿವಾಸಯ್ಯ ಪಾಲ್ಗೊಂಡಿದ್ದರು.

---

ಉದಯವಾಣಿ 25.8.2014



### ವಿಚಾರ ಗೋಷ್ಠಿ...

ನಗರದ ಗಾಂಧಿಭವನದಲ್ಲಿ ಭಾನುವಾರ ಏರ್ಪಡಿಸಿದ್ದ 'ಮಹಾತ್ಮ ಗಾಂಧೀಜಿ ಅವರಿಗೆ ಪ್ರೇರಣೆ ನೀಡಿದ ಕೃತಿಗಳು' ವಿಚಾರ ಗೋಷ್ಠಿಯನ್ನು ಸುಬ್ರಾಯಶರ್ಮ ಉದ್ಘಾಟಿಸಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಡಾ.ಹೊ. ಶ್ರೀನಿವಾಸಯ್ಯ, ವೂಡೇ ಪಿ. ಕೃಷ್ಣ ಪಾಲ್ಗೊಂಡಿದ್ದರು.

ಪ್ರಜಾವಾಣಿ

ಶುಕ್ರವಾರ
22ನೇ ಆಗಸ್ಟ್ 2014

'ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್' ತಂತ್ರಜ್ಞಾನ ಸಮ್ಮೇಳನದಲ್ಲಿ ದೇವೇಗೌಡ ಅಭಿಪ್ರಾಯ

# ವಿಜ್ಞಾನಿಗಳು, ತಂತ್ರಜ್ಞರು ದೇಶ ಮುನ್ನಡೆಸಬೇಕು

ಪ್ರಜಾವಾಣಿ ವಾರ್ತೆ

ಬೆಂಗಳೂರು: ದೇಶ ಮುನ್ನಡೆಸುವವರು ರಾಜಕಾರಣಿಗಳಲ್ಲ. ಬದಲಾಗಿ ವಿಜ್ಞಾನಿಗಳು ಹಾಗೂ ತಂತ್ರಜ್ಞರು. ಇವರಿಂದಾಗಿಯೇ ಭಾರತ ಈಗ ಅಭಿವೃದ್ಧಿ ಪಥದಲ್ಲಿ ಸಾಗುತ್ತಿದೆ. ಇವರೆಲ್ಲಾ ದೇಶಕ್ಕೆ ಮಾರ್ಗದರ್ಶನ ನೀಡಬೇಕು' ಎಂದು ಸಂಸದ ಎಚ್.ಡಿ.ದೇವೇಗೌಡ ಅವರು ಅಭಿಪ್ರಾಯಪಟ್ಟರು.

ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ಗುರುವಾರ 'ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್– 2014' ತಂತ್ರಜ್ಞಾನ ಸಮ್ಮೇಳನ ಉದ್ಘಾಟಿಸಿ ಅವರು ಮಾತನಾಡಿದರು.

'ಭಾರತವನ್ನು ಆರ್ಥಿಕ ಮಹಾಶಕ್ತಿಯನ್ನಾಗಿ ರೂಪಿಸುವ ಜವಾಬ್ದಾರಿ ವಿಜ್ಞಾನಿಗಳು, ತಂತ್ರಜ್ಞರು ಹಾಗೂ ಆರ್ಥಿಕ ತಜ್ಞರ ಕೈಯಲ್ಲಿದೆ. ಭಾರತ ಈಗಾಗಲೇ ಬಾಹ್ಯಾಕಾಶ ಹಾಗೂ ಪರಮಾಣು ಕ್ಷೇತ್ರದಲ್ಲಿ ಉನ್ನತಿ ಸಾಧಿಸಿದೆ. ಇದಕ್ಕೆ ವಿಜ್ಞಾನಿಗಳು ಅಭಿನಂದನಾರ್ಹರು' ಎಂದರು.

ತಪ್ಪು ಭಾವನೆ ಇತ್ತು: "ಗ್ರಾಮೀಣ ಪ್ರದೇಶದ ನಾನು ಮುಖ್ಯಮಂತ್ರಿಯಾದಾಗ ಎಲ್ಲರಲ್ಲೂ ತಪ್ಪು ಭಾವನೆ ಇತ್ತು. ತಂತ್ರಜ್ಞಾನ ಹಾಗೂ ನಗರ ಭಾಗದತ್ತ ಗಮನ ಹರಿಸುವುದಿಲ್ಲ ಎಂಬ ಅಭಿಪ್ರಾಯವನ್ನು ಮಾಧ್ಯಮಗಳು ಮೂಡಿಸಿದ್ದವು. ಆದರೆ, ಬೆಂಗಳೂರು ಇಂದು ಮಾಹಿತಿ ತಂತ್ರಜ್ಞಾನ (ಐಟಿ) ನಗರಿ ಎನಿಸಿಕೊಳ್ಳಲು ಅಂದು ಕೈಗೊಂಡ ನಿರ್ಧಾರಗಳೇ ಕಾರಣ' ಎಂದರು.



ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ 'ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್– 2014' ತಂತ್ರಜ್ಞಾನ ಸಮ್ಮೇಳನದ ವಸ್ತು ಪ್ರದರ್ಶನಕ್ಕೆ ಗುರುವಾರ ಚಾಲನೆ ನೀಡಿದ ಎಚ್.ಡಿ.ದೇವೇಗೌಡ ಅವರು ಮಂಗಳ ನೌಕೆಯ (ಮಾರ್ಸ್ ಆರ್ಬಿಟರ್ ಮಿಷನ್) ಮಾದರಿ ಬಗ್ಗೆ ಇಸ್ರೊ ವಿಜ್ಞಾನಿ ಬಿ.ಆರ್.ಗುರುಪ್ರಸಾದ್ ಅವರಿಂದ ಮಾಹಿತಿ ಪಡೆದರು. ಸಮ್ಮೇಳನದ ಸಂಘಟನಾ ಸಮಿತಿ ಅಧ್ಯಕ್ಷ ಎಲ್.ವಿ.ಮುರಳೀಕೃಷ್ಣ ರೆಡ್ಡಿ ಮತ್ತಿತರರು ಚಿತ್ರದಲ್ಲಿದ್ದಾರೆ –ಪ್ರಜಾವಾಣಿ ಚಿತ್ರ

ದೇವೇಗೌಡ ಅವರು ಮಾತನಾಡುತ್ತಿದ್ದಾಗ ವಿದ್ಯುತ್ ಕೈಕೊಟ್ಟಿತು. ಆಗ ಅವರು, 'ಈ ದೇಶದ ಸದ್ಯದ ದೊಡ್ಡ ಸಮಸ್ಯೆ ವಿದ್ಯುತ್. ಈ ಸಮಸ್ಯೆ ಹೋಗಲಾಡಿಸಲು ವಿಜ್ಞಾನಿಗಳು ಸಂಶೋಧನೆ ನಡೆಸಬೇಕು. 24x7 ಗಂಟೆ ವಿದ್ಯುತ್ ನೀಡಲು ಪ್ರಯತ್ನಿಸುವುದಾಗಿ ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ. ಅವರ ಪ್ರಯತ್ನ ಯಶಸ್ವಿಯಾಗಲಿ' ಎಂದರು.

ಕೇಂದ್ರ ಭೂ ವಿಜ್ಞಾನ ಇಲಾಖೆಯ ಕಾರ್ಯದರ್ಶಿ ಡಾ.ಶೈಲೇಶ್ ನಾಯಕ್ ಅವರು ಸಮುದ್ರ ಸಂಪನ್ಮೂಲ ಬಳಕೆ ಕುರಿತು ಮಾತನಾಡಿದರು.

ವಸ್ತು ಪ್ರದರ್ಶನಕ್ಕೆ ಚಾಲನೆ: ಇದಕ್ಕೂ ಮೊದಲು ದೇವೇಗೌಡ ಅವರು ಹೊಸ ಅನ್ವೇಷಣೆಗಳು ಹಾಗೂ ತಂತ್ರಜ್ಞಾನ ಮಾದರಿ ವಸ್ತು ಪ್ರದರ್ಶನಕ್ಕೆ ಚಾಲನೆ ನೀಡಿದರು.

ಇಸ್ರೊ ವತಿಯಿಂದ ಭಾರತದ ಅನೇಕ ಉಪಗ್ರಹ ಹಾಗೂ ರಾಕೆಟ್ ಮಾದರಿಯನ್ನು ಪ್ರದರ್ಶನಕ್ಕಿಡಲಾಗಿದೆ.

ಈ ಬಗ್ಗೆ ಇಸ್ರೊ ವಿಜ್ಞಾನಿ ಬಿ.ಆರ್. ಗುರುಪ್ರಸಾದ್ ಮಾಹಿತಿ ನೀಡಿದರು.

ರಕ್ಷಣಾ ಸಂಶೋಧನೆ ಹಾಗೂ ಅಭಿವೃದ್ಧಿ ಸಂಸ್ಥೆಯ (ಡಿಆರ್‌ಡಿಒ) ವಿನ್ಯಾಸಗೊಳಿಸಿರುವ ಪ್ಯಾರಾಚೂಟ್‌ಗಳು, ರಾಡಾರ್‌ಗಳು, ಚಾಲಕ ರಹಿತ ಹಾಗೂ ಬೇಹುಗಾರಿಕಾ ವಿಮಾನಗಳ ಮಾದರಿಗಳನ್ನು ಪ್ರದರ್ಶನಕ್ಕಿಡಲಾಗಿದೆ.

'ಭಾರತವನ್ನು ಆರ್ಥಿಕ ಮಹಾಶಕ್ತಿಯನ್ನಾಗಿ ರೂಪಿಸಲು ಬದಲಾವಣೆಯ ಸಾಧನವಾಗಿ ಮುಂದುವರಿದ ತಂತ್ರಜ್ಞಾನ' ಎಂಬ ಹೆಸರಿನ ಈ ಸಮ್ಮೇಳನದಲ್ಲಿ 160ಕ್ಕೂ ಹೆಚ್ಚು ಮಂದಿ ಪ್ರಬಂಧ ಮಂಡಿಸಲಿದ್ದಾರೆ. ವಿವಿಧ ಉದ್ಯಮಗಳ ಸಮಾರು 1000 ಮಂದಿ ಪಾಲ್ಗೊಂಡಿದ್ದಾರೆ.

ಸಮ್ಮೇಳನದ ಸಂಘಟನಾ ಸಮಿತಿ ಅಧ್ಯಕ್ಷ ಎಲ್.ವಿ.ಮುರಳೀಕೃಷ್ಣ ರೆಡ್ಡಿ, ಭಾರತೀಯ ಎಂಜಿನಿಯರುಗಳ ಸಂಸ್ಥೆಯ ಅಧ್ಯಕ್ಷ ಅಶೋಕ್ ಕುಮಾರ್ ಬಾಸ, ಸಂಸ್ಥೆಯ ರಾಜ್ಯ ಘಟಕದ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ವಿಶ್ವೇಶ್ವರಯ್ಯ ತಾಂತ್ರಿಕ ವಿವಿ ಕುಲಪತಿ ಡಾ.ಎಚ್.ಮಹೇಶ್ವರಪ್ಪ, ನ್ಯಾಷನಲ್ ಡಿಸೈನ್ ಅಂಡ್ ರಿಸರ್ಚ್ ಫೋರಮ್‌ನ ಅಧ್ಯಕ್ಷ ಡಾ.ಬಿ.ವಿ.ಎ.ರಾವ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪ್ರೊಡಕ್ಷನ್ ಎಂಜಿನಿಯರ್ಸ್ ಅಧ್ಯಕ್ಷ ಪ್ರೊ.ಆರ್.ಎಂ.ವಸಗಮ್ ಹಾಗೂ ಡಾ.ಕೆ.ರಾಮಚಂದ್ರ ಇದ್ದರು.

ವಿಜಯವಾಣಿ
• BANGALORE

ಶುಕ್ರವಾರ
22 ಆಗಸ್ಟ್ 2014



# ವಿಜ್ಞಾನಿಗಳಿಂದ ಮಾತ್ರ ಭಾರತ ಸೂಪರ್ ಪವರ್

## ■ ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡ ಪ್ರತಿಪಾದನೆ

ಬೆಂಗಳೂರು: ಭಾರತವನ್ನು ಸೂಪರ್ ಪವರ್ ರಾಷ್ಟ್ರವನ್ನಾಗಿ ವಿಜ್ಞಾನಿಗಳು ಮತ್ತು ತಂತ್ರಜ್ಞಾನ ಕ್ಷೇತ್ರದವರೇ ರೂಪಿಸಬೇಕು ಎಂದು ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡ ಹೇಳಿದರು.

ಇಂಡಿಯಾ ಟೆಕ್ನಾಲಜಿ ಕಾಂಗ್ರೆಸ್ ಗುರುವಾರ ನಿಮ್ಹಾನ್ಸ್ ಸಭಾಂಗಣದಲ್ಲಿ ಆಯೋಜಿಸಿದ್ದ 'ಭಾರತವನ್ನು ಆರ್ಥಿಕವಾಗಿ ಸೂಪರ್ ಪವರ್ ಮಾಡಲು ಇರುವ ಅತ್ಯಾಧುನಿಕ ತಂತ್ರಜ್ಞಾನ' ಎಂಬ ವಿಚಾರಸಂಕಿರಣದಲ್ಲಿ ಮಾತನಾಡಿದರು.

ಭಾರತವನ್ನು ಸೂಪರ್ ಪವರ್ ರಾಷ್ಟ್ರವಾಗಿ ರೂಪಿಸಲು ರಾಜಕಾರಣಿಗಳು ಕೇವಲ ಸಹಾಯ ಮಾಡಬಹುದೇ ಹೊರತು ಯೋಜನೆ ರೂಪಿಸಲು ಸಾಧ್ಯವಿಲ್ಲ. ಹಾಗಾಗಿ ವಿಜ್ಞಾನಿಗಳು ಮತ್ತು ತಂತ್ರಜ್ಞರು ಸೇರಿ ಅತ್ಯಾಧುನಿಕ ತಂತ್ರಜ್ಞಾನ ಅಳವಡಿಸಿಕೊಂಡು ಉತ್ತಮ ಯೋಜನೆ ರೂಪಿಸಬೇಕು ಎಂದರು.

ದೇಶವು ವಿದ್ಯುತ್ ಸಮಸ್ಯೆ ಎದುರಿಸುತ್ತಿದೆ. ಕೇಂದ್ರ ಸರ್ಕಾರ ಮಾತ್ರ 24 ಗಂಟೆಗಳ ಕಾಲ ವಿದ್ಯುತ್ ನೀಡುತ್ತೇವೆ ಎಂದು ಹೇಳುತ್ತಿದೆ. ಈ ಸಮಸ್ಯೆ ನಿವಾರಣೆಗಾಗಿ ದೂರದೃಷ್ಟಿಯ ಯೋಜನೆ ರೂಪಿಸಬೇಕು. ಜನರೆಲ್ಲರೂ ಭವಿಷ್ಯದ ಬಗ್ಗೆ ಯೋಚಿಸುತ್ತಿದ್ದಾರೆಯೇ ಹೊರತು ಭೂತಕಾಲದ ಬಗ್ಗೆ ತಲೆಕೆಡಿಸಿಕೊಳ್ಳುತ್ತಿಲ್ಲ. ಗೋಧ್ರಾ ಹತ್ಯಾಕಾಂಡವನ್ನು ಮರೆತಿರುವ ಜನರು ಅದೇ ರಾಜ್ಯದ ಮುಖ್ಯಮಂತ್ರಿಯನ್ನು ಪ್ರಧಾನಿಯಾಗಿ ಆಯ್ಕೆ ಮಾಡಿದ್ದಾರೆ ಎಂದು ಹೇಳಿದರು.



ಇಂಡಿಯಾ ಟೆಕ್ನಾಲಜಿ ಕಾಂಗ್ರೆಸ್ ಗುರುವಾರ ಆಯೋಜಿಸಿದ್ದ ವಿಚಾರಸಂಕಿರಣವನ್ನು ಮಾಜಿ ಪ್ರಧಾನ ಮಂತ್ರಿ ಎಚ್.ಡಿ. ದೇವೇಗೌಡ ಉದ್ಘಾಟಿಸಿದರು.

**ಯಂತ್ರೋಪಕರಣ ಪ್ರದರ್ಶನ**

ರಕ್ಷಣಾ ಸಂಶೋಧನಾ ಮತ್ತು ಅಭಿವೃದ್ಧಿ ಸಂಸ್ಥೆ (ಡಿಆರ್‌ಡಿಒ), ರಾಷ್ಟ್ರೀಯ ವಿಪತ್ತು ಸ್ಪಂದನಾ ಪಡೆ (ಎನ್‌ಡಿಆರ್‌ಎಫ್) ಸೇರಿ ಇತರ ಕಂಪನಿಗಳು ಸಂಶೋಧಿಸಿರುವ ಮತ್ತು ವಿನ್ಯಾಸ ಮಾಡಿರುವ ಯಂತ್ರೋಪಕರಣಗಳನ್ನು ಪ್ರದರ್ಶಿಸಲಾಯಿತು.

ಭೂವಿಜ್ಞಾನ ಸಚಿವಾಲಯದ ಕಾರ್ಯದರ್ಶಿ ಡಾ. ಶೈಲೇಶ್ ನಾಯಕ್ ಮಾತನಾಡಿ, ಸಮುದ್ರ ತಳದಲ್ಲಿ ಸಾಕಷ್ಟು ಖನಿಜಾಂಶಗಳಿದ್ದು, ಆಳಕ್ಕೆ ಇಳಿಯುವ ತಂತ್ರಜ್ಞಾನ ರೂಪಿಸಿಲ್ಲ. 3000 ಅಡಿ ಆಳಕ್ಕೆ ಇಳಿದರೆ ಸಾಕಷ್ಟು ಖನಿಜ ಸಂಪನ್ಮೂಲಗಳು ಲಭ್ಯವಾಗಲಿವೆ. ಶುದ್ಧನೀರು ಸಹ ದೊರೆಯಲಿದೆ. ಇದರಿಂದ ಕುಡಿಯುವ ನೀರಿನ ಸಮಸ್ಯೆ ಬಗೆಹರಿಸಬಹುದು ಎಂದರು.

ದಿ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಅಧ್ಯಕ್ಷ ಅಶೋಕ್‌ಕುಮಾರ್, ವಿಶ್ವೇಶ್ವರಯ್ಯ ತಾಂತ್ರಿಕ ಮಹಾವಿದ್ಯಾಲಯ ಕುಲಪತಿ ಡಾ. ಎಚ್. ಮಹೇಶ್ವರಪ್ಪ, ರಾಷ್ಟ್ರೀಯ ವಿನ್ಯಾಸ ಮತ್ತು ಸಂಶೋಧನಾ ವೇದಿಕೆ ಅಧ್ಯಕ್ಷ ಡಾ. ಬಿ.ವಿ.ಎ. ರಾವ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪ್ರೊಡಕ್ಷನ್ ಇಂಜಿನಿಯರ್ಸ್ ಅಧ್ಯಕ್ಷ ಪ್ರೊ. ಆರ್.ಎಂ. ವಾಸಗಂ, ವಿಚಾರಸಂಕಿರಣ ಆಯೋಜನಾ ಸಮಿತಿ ಅಧ್ಯಕ್ಷ ಡಾ.ಎಲ್.ವಿ. ಮುರಳೀಕೃಷ್ಣ ರೆಡ್ಡಿ ಮತ್ತಿತರರು ಉಪಸ್ಥಿತರಿದ್ದರು.

# ದೇಶದ ಪ್ರಗತಿ ವಿಜ್ಞಾನಿಗಳಿಂದ ಮಾತ್ರ ಸಾಧ್ಯ: ದೇವೇಗೌಡ

ಬೆಂಗಳೂರು: ನೆರೆಹೊರೆ ರಾಷ್ಟ್ರಗಳೊಂದಿಗೆ ಉತ್ತಮ ಸಂಬಂಧ ಹೊಂದಿರಬೇಕೆಂಬ ಉದ್ದೇಶದಿಂದ ತಾವು ಪ್ರಧಾನಿಯಾಗಿದ್ದಾಗ ಮಾಜಿ ರಾಷ್ಟ್ರಪತಿ ಅಬ್ದುಲ್ ಕಲಾಂ ಹಾಗು ಮಾಜಿ ಸಚಿವ ಚಿದಂಬರಂ ಅವರ ಪ್ರಸ್ತಾವನೆಯಾದ ಪೋಕ್ರಾನ್ ಅಣು ಪರೀಕ್ಷೆಯನ್ನು ತಿರಸ್ಕರಿಸಿದ್ದ ಎಂದು ಮಾಜಿ ಪ್ರಧಾನಿ ದೇವೇಗೌಡ ತಿಳಿಸಿದರು.

ನೆರೆಹೊರೆ ರಾಷ್ಟ್ರಗಳಿಗೆ ಇದು ಆಪತ್ತು ಉಂಟು ಮಾಡಬಹುದು ಎಂಬ ಭೀತಿಯಿಂದ ಮತ್ತು ಉತ್ತಮ ಸಂಬಂಧ ಹೊಂದಿರಬೇಕೆಂಬ ಕಾರಣಕ್ಕಾಗಿ ಪೋಕ್ರಾನ್ ಅಣು ಪರೀಕ್ಷೆಯನ್ನು ಮುಂದೂಡಿದ್ದು, ನಂತರ ವಾಜಪೇಯಿ ಸರ್ಕಾರ ಇದನ್ನು ಪೂರ್ಣಗೊಳಿಸಿತು ಎಂದರು.

ನಗರದ ನಿಮ್ಹಾನ್ಸ್ ಕನ್ವೆನ್ಷನ್ ಸೆಂಟರ್‌ನಲ್ಲಿ ನಡೆದ ಇಂಡಿಯನ್ ತಂತ್ರಜ್ಞಾನ ಕಾಂಗ್ರೆಸ್ -2014 ಉದ್ಘಾಟಿಸಿ ಮಾತನಾಡಿದ ಅವರು ದೇಶವನ್ನು ಪ್ರಗತಿಯೆಡೆಗೆ ಕೊಂಡೊಯ್ಯಲು ರಾಜಕಾರಣಿಗಳಿಂದ ಸಾಧ್ಯವಿಲ್ಲ. ಅದೇನಿದ್ದರೂ ವಿಜ್ಞಾನಿಗಳಿಂದ ಮಾತ್ರ ಸಾಧ್ಯ. ರಾಜಕಾರಣಿಗಳೇನಿದ್ದರೂ ಅದಕ್ಕೆ ಸಹಕಾರ ನೀಡುವವರಷ್ಟೆ ಎಂದು ಹೇಳಿದರು.

ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ರಾಷ್ಟ್ರವನ್ನು ಸೂಪರ್ ಪವರ್‌ನನ್ನಾಗಿ ಮಾಡುವ ಪಣ ತೊಡಬೇಕು ಎಂದು ಕರೆ ನೀಡಿದ ಅವರು ದೇಶಕ್ಕೆ ದೂರದೃಷ್ಟಿ ಯೋಜನೆಗಳ ಅಗತ್ಯವಿದೆ ಎಂದು ತಿಳಿಸಿದರು.



ಕೇಂದ್ರದ ಬೂ ವಿಜ್ಞಾನ ಇಲಾಖೆಯ ಕಾರ್ಯದರ್ಶಿ ಶೈಲೇಶ್ ನಾಯಕ್ ಮಾತನಾಡಿ ದೇಶದಲ್ಲಿ ತಂತ್ರಜ್ಞಾನ ಎಷ್ಟೇ ಮುಂದುವರೆದಿದ್ದರೂ ಸಮುದ್ರದ ಆಳದಲ್ಲಿ ಹುದುಗಿರುವ ಖನಿಜ ಸಂಪತ್ತನ್ನು ಹೊರತೆಗೆಯುವ ತಂತ್ರಜ್ಞಾನ ಅಭಿವೃದ್ಧಿಯಾಗಿಲ್ಲ. ಈಗಾಗಲೇ ದೇಶ ಸಾಕಷ್ಟು ಸಂಪನ್ಮೂಲಗಳ ಕೊರತೆ ಎದುರಿಸುತ್ತಿದ್ದು ಈ ನಿಟ್ಟಿನಲ್ಲಿ ತಂತ್ರಜ್ಞಾನವನ್ನು ಬೆಳೆಸಬೇಕಿದೆ ಎಂದ ಅವರು ಸಮುದ್ರದ ನೀರನ್ನು ಶುದ್ಧ ನೀರಾಗಿ ಪರಿವರ್ತಿಸುವ ತಂತ್ರಜ್ಞಾನವನ್ನೂ ಅಭಿವೃದ್ಧಿಪಡಿಸಬೇಕಿದೆ ಎಂದುಅವರು ಹೇಳಿದರು.

ಕಾರ್ಯಕ್ರಮದಲ್ಲಿ ಕೆಎಸ್‌ಪಿಯ ಅಧ್ಯಕ್ಷ ಪ್ರೊ.ಡೇ.ಪಿ.ಕೃಷ್ಣ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಕುಲಪತಿ ಡಾ.ಹೆಚ್.ಮಹೇಶಪ್ಪ ಸೇರಿದಂತೆ ಮುಂತಾದವರು ಉಪಸ್ಥಿತರಿದ್ದರು.

ಈ ಸಂಜೆ

ಗುರುವಾರ, 21-08-2014

## ಸೂಪರ್ ಪವರ್ ರಾಷ್ಟ್ರ ನಿರ್ಮಾಣಕ್ಕೆ

# ವಿಜ್ಞಾನಿಗಳ ಸಹಕಾರ ಅಗತ್ಯ



ಬೆಂಗಳೂರು, ಆ.21-ರಾಷ್ಟ್ರವನ್ನು ಸೂಪರ್ ಪವರ್ ಮಾಡಲು ವಿಜ್ಞಾನಿಗಳು ಮತ್ತು ತಂತ್ರಜ್ಞರಿಂದ ಸಾಧ್ಯ ಆದರೆ ರಾಜಕಾರಣಿಗಳಿಂದಲ್ಲ ಎಂದು ಮಾಜಿ ಪ್ರಧಾನಿ ಹಾಗೂ ಸಂಸದ ಎಚ್.ಡಿ.ದೇವೇಗೌಡ ಇಂದಿಲ್ಲಿ ಅಭಿಪ್ರಾಯ ಪಟ್ಟಿದ್ದಾರೆ.

ನಗರದ ನಿಮ್ಹಾನ್ಸ್ ಕನ್ವೆಷನ್ ಸೆಂಟರ್‌ನಲ್ಲಿ ಇಂಡಿಯನ್ ಟೆಕ್ನಾಲಜಿ ಕಾಂಗ್ರೆಸ್ ಉದ್ಘಾಟನೆ ಮಾಡಿ ಮಾತನಾಡಿದ ಅವರು, ರಾಜಕಾರಣಿಗಳು ಸೂಪರ್ ಪವರ್ ರಾಷ್ಟ್ರ ನಿರ್ಮಾಣದ ಬಗ್ಗೆ ಆಶ್ವಾಸನೆ ಕೊಡಬಹುದು ಆದರೆ ಅದಕ್ಕೆ ಪೂರಕವಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆಸಲು ವಿಜ್ಞಾನಿ ಮತ್ತು ತಂತ್ರಜ್ಞಾನಿಗಳು ಶ್ರಮವಹಿಸಬೇಕಿದೆ ಎಂದರು.

2025ನೇ ಇಸವಿಗೆ ಸೂಪರ್ ಪವರ್ ರಾಷ್ಟ್ರವಾಗಿ ಭಾರತ ಹೊರಹೊಮ್ಮಬೇಕು ಎಂಬುದು ಅನೇಕರ ಕನಸು. ಈ ಹಿನ್ನೆಲೆಯಲ್ಲಿ ತಂತ್ರಜ್ಞರು, ವಿಜ್ಞಾನಿಗಳು ಹೆಚ್ಚು ಹೆಚ್ಚು ಆವಿಷ್ಕಾರಗಳಲ್ಲಿ ತೊಡಗಿಕೊಂಡು ರಾಷ್ಟ್ರದ ಅಭಿವೃದ್ಧಿಗೆ ಶ್ರಮಿಸಬೇಕಿದೆ ಎಂದರು.

ತಾವು ಪ್ರಧಾನಿಯಾಗಿದ್ದಾಗ ರಾಜಸ್ಥಾನದ ಪೋಕ್ರಾನ್‌ನಲ್ಲಿ ಅಣು ಪರೀಕ್ಷೆಗೆ ಮುಂದಾಗಿದ್ದೆವು. ಆಗ ಅಮೆರಿಕಾ ದಿಗ್ಬಂಧನ ಹೇರಿತ್ತು. ಆದರೂ ಅಣು ವಿಜ್ಞಾನಿ ಅಬ್ದುಲ್ ಕಲಾಂ ಹಾಗೂ ಚಿದಂಬರಂ ಅವರ ಸಲಹೆಯಂತೆ ಮುಂದುವರೆದೆವಾದರೂ ನೆರೆಹೊರೆಯ ರಾಷ್ಟ್ರಗಳಿಗೆ ತೊಂದರೆಯಾಗಬಾರದು ಎಂಬ ಕಾರಣಕ್ಕೆ ಕೈಬಿಡಲಾಗಿತ್ತು. ಅಮೆರಿಕಾದ ಬೆದರಿಕೆಯಿಂದಲ್ಲ ಎಂದು ತಿಳಿಸಿದರು.

ಆದರೆ ಮುಂದಿನ ದಿನಗಳಲ್ಲಿ ವಾಜಪೇಯಿ ಅವರು ಅಮೆರಿಕಾದ ದಿಗ್ಬಂಧನವನ್ನು ಲೆಕ್ಕಿಸದೆ ನೂತನ ಆವಿಷ್ಕಾರಗಳಿಗೆ ಮಾನ್ಯತೆ ನೀಡಿ ಅಣು ಪರೀಕ್ಷೆಗೂ ಅವಕಾಶ ಕೊಡುವ ಮೂಲಕ ದೇಶಕ್ಕೆ ಕೊಡುಗೆ ನೀಡಿದ್ದಾರೆ ಎಂದು ವಿವರಿಸಿದರು.

ಬೆಂಗಳೂರು ಐಟಿ ರಾಜಧಾನಿಯಾಗಲು ಅಂದು ತಾವು ಪ್ರಧಾನಿಯಾಗಿದ್ದಾಗ ನೀಡಿದ ಆದ್ಯತೆಯೇ ಕಾರಣ ಜಮೀನು ಸೇರಿದಂತೆ ಎಲ್ಲಾ ರೀತಿಯ ಮೂಲಭೂತ ಸೌಲಭ್ಯಗಳನ್ನು ಕಂಪನಿಗಳಿಗೆ ಒದಗಿಸಿಕೊಟ್ಟಿದ್ದರಿಂದ ಇಂದು ಬೆಂಗಳೂರು ವಿಶ್ವವೇ ಗುರುತಿಸುವಂತಹ ಮಟ್ಟದಲ್ಲಿ ಬೆಳೆದು ನಿಂತಿದೆ ಎಂದರು.

ದೇಶದಲ್ಲಿ ವಿದ್ಯುತ್ ಹಾಗೂ ಇಂಧನದ ಕೊರತೆ ಸಾಕಷ್ಟಿದೆ. ಈ ಎರಡೂ ಕ್ಷೇತ್ರಗಳಲ್ಲಿ ರಾಷ್ಟ್ರ ಸ್ವಾವಲಂಬನೆ ಸಾಧಿಸಿದಾಗ ಮಾತ್ರ ಇನ್ನಷ್ಟು ಬೆಳವಣಿಗೆಯೊಂದಿಗೆ ಸೂಪರ್ ಪವರ್ ರಾಷ್ಟ್ರವಾಗಲು ಸಾಧ್ಯ. ನಮ್ಮಲ್ಲಿ ಸಾಕಷ್ಟು ನೈಸರ್ಗಿಕ ಸಂಪನ್ಮೂಲಗಳಿದ್ದರೂ ಇಂಧನ ಹಾಗೂ ವಿದ್ಯುತ್ ಕ್ಷೇತ್ರದಲ್ಲಿ ಸ್ವಾವಲಂಬಿಯಾಗಲು ಸಾಧ್ಯವಾಗಿಲ್ಲ. ವಿಜ್ಞಾನಿಗಳು ಇವುಗಳ ಕೊರತೆ ನೀಗಿಸಲು ಅಗತ್ಯವಿರುವ ಪರ್ಯಾಯ ಮಾರ್ಗವನ್ನು ಕಂಡು ಹಿಡಿಯಬೇಕೆಂದು ಹೇಳಿದರು.

ಸಮಾರಂಭದಲ್ಲಿ ವಿಶ್ವೇಶ್ವರಯ್ಯ ತಾಂತ್ರಿಕ ವಿವಿಯ ಉಪಕುಲಪತಿ ಡಾ.ಎಚ್.ಮಹೇಶಪ್ಪ ಅಶೋಕ್‌ಕುಮಾರ್ ಬಾಸಾ, ಪೂರ್ಣ ಪಿ.ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಸಂಜೆವಾಣಿ

3 ಗುರುವಾರ 21 ಆಗಸ್ಟ್ 2014

# ಸೂಪರ್ ಪವರ್ ಭಾರತ ನಿರ್ಮಾಣ ವಿಜ್ಞಾನಿಗಳಿಂದ ಮಾತ್ರ ಸಾಧ್ಯ: ಗೌಡ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಆ. ೨೧- ಭಾರತವನ್ನು "ಸೂಪರ್ ಪವರ್" ರಾಷ್ಟ್ರವಾಗಿಸಲು ರಾಜಕಾರಣಿಗಳಿಂದ ಸಾಧ್ಯವಾಗುವುದಿಲ್ಲ, ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ದೇಶವನ್ನು "ಸೂಪರ್ ಪವರ್" ರಾಷ್ಟ್ರವಾಗಿಸಲು ದಿಟ್ಟ ನಿರ್ಧಾರ ಕೈಗೊಳ್ಳಬೇಕು ಎಂದು ಮಾಜಿ ಪ್ರಧಾನಿ ಹೆಚ್.ಡಿ. ದೇವೇಗೌಡ ಕರೆ ನೀಡಿದ್ದಾರೆ.

ನಗರದ ನಿಮ್ಹಾನ್ಸ್ ಕನ್ವೆನ್ಷನ್ ಸೆಂಟರ್‌ನಲ್ಲಿಂದು ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಇಂಡಿಯನ್ ತಂತ್ರಜ್ಞಾನ ಕಾಂಗ್ರೆಸ್ -2014ನ್ನು ಉದ್ಘಾಟಿಸಿ ಮಾತನಾಡಿದ ಅವರು, ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳೆ ದೇಶವನ್ನು ಪ್ರಗತಿಯೆಡೆಗೆ ಕೊಂಡೊಯ್ಯಬೇಕು. ರಾಜಕಾರಣಿಗಳು ಏನಿದ್ದರೂ ಅದಕ್ಕೆ ಬೇಕಾದ ಸಹಾಯ ನೀಡಬಹುದು, ಹೊರತು ಅವರಿಂದ ಸಾಧ್ಯವಾಗುವುದಿಲ್ಲ. ಈ ಬಗ್ಗೆ ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳು ದಿಟ್ಟನಿರ್ಧಾರ ಕೈಗೊಂಡು ಹೊಸ ತಂತ್ರಜ್ಞಾನದೆಡೆಗೆ ಮುನ್ನುಗ್ಗಬೇಕು ಎಂದು ಹೇಳಿದರು.



ನಗರದ ನಿಮ್ಹಾನ್ಸ್ ಸಭಾಂಗಣದಲ್ಲಿ ಇಂದು ನಡೆದ ಭಾರತೀಯ ತಂತ್ರಜ್ಞಾನ ಸಮಾವೇಶವನ್ನು ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡರವರು ಉದ್ಘಾಟಿಸಿದರು.

1997ರಲ್ಲಿ ಪ್ರಧಾನಿಯಾಗಿದ್ದಾಗ ಪೋಕ್ರಾನ್ ಅಣು ಪರೀಕ್ಷೆ ನಡೆಸುವಂತೆ ಅಂದಿನ ಅಬ್ದುಲ್ ಕಲಾಂ ಹಾಗೂ ಚಿದಂಬರಂ ತಮ್ಮಲ್ಲಿ ಮನವಿ ಮಾಡಿದರು. ಆದರೆ, ನೆರೆಹೊರೆಯ ರಾಷ್ಟ್ರಗಳಿಗೆ ಇದು ಅಪತ್ಯವಾಗಬಹುದು ಎಂದು ಅದನ್ನು ನಾನು ತಿರಸ್ಕರಿಸಿದ್ದೆ. ಏಕೆಂದರೆ ದೇಶವು ಯಾವಾಗಲೂ ನೆರೆಹೊರೆಯ ರಾಷ್ಟ್ರಗಳೊಂದಿಗೆ ಉತ್ತಮ ಸಂಬಂಧವಿರಬೇಕು ಎಂದು ನಾನು ಬಯಸಿದ್ದೆ.

ಅಮೆರಿಕದ ದಿಗ್ಬಂಧನದಿಂದ ಯಾವುದೇ ತೊಂದರೆ ಆಗದಿದ್ದರೂ ನೆರೆಹೊರೆಯ ರಾಷ್ಟ್ರಗಳೊಂದಿಗೆ ಉತ್ತಮ ಸಂಬಂಧ ಇರಬೇಕು ಎಂಬ ಕಾರಣದಿಂದ ನಾನು ಪೋಕ್ರಾನ್ ಅಣುಪರೀಕ್ಷೆಯನ್ನು ಮುಂದೂಡಿದ್ದೇನೆ ಎಂದು ಸ್ಪಷ್ಟಪಡಿಸಿದ ಅವರು, ಬಳಿಕ ಅದನ್ನು 1998ರಲ್ಲಿ ವಾಜಪೇಯಿ ಸರ್ಕಾರ ಪೂರ್ಣಗೊಳಿಸಿತು ಎಂದು ಹೇಳಿದರು.

ಬೆಂಗಳೂರು ಇಂದು ಐಟಿ ಕ್ಯಾಪಿಟಲ್ ಆಗುವುದಕ್ಕೆ ತಮ್ಮ ಕೊಡುಗೆಯು ಇದೆ ಎಂದು ಹೇಳಿದ ಅವರು, ದೇಶವು ವಿದ್ಯುತ್ ಸಮಸ್ಯೆಯನ್ನು ಎದುರಿಸುತ್ತಿದ್ದು, ಇದರ ಬಗ್ಗೆ ದೂರದೃಷ್ಟಿಯ ಯೋಜನೆಗಳು ಅಗತ್ಯವಿದೆ ಎಂದು ಹೇಳಿದ ಅವರು, ಜನತೆ ಬದಲಾವಣೆ ಬಯಸಿದ್ದಾರೆ ಹಾಗೂ ಹಿಂದಿನದ್ದನ್ನು ಬೇಗನೇ ಮರೆಯುತ್ತಾರೆ ಎಂದು ಹೇಳಿ, 2002ರ ಗುಜರಾತ್ ಗಲಭೆಯನ್ನು ಪರೋಕ್ಷವಾಗಿ ಪ್ರಸ್ತಾಪಿಸಿ, 2002ರ ಘಟನೆಯನ್ನು ಜನತೆ ಮರೆತು 2014ರಲ್ಲಿ ಅದೇ ವ್ಯಕ್ತಿಯನ್ನು ಆಯ್ಕೆ ಮಾಡಿದ್ದಾರೆ ಎಂದು ಹೇಳಿದರು.

ಕೇಂದ್ರ ಭೂ ವಿಜ್ಞಾನ ಇಲಾಖೆಯ ಕಾರ್ಯದರ್ಶಿ ಡಾ. ಶೈಲೇಶ್ ನಾಯಕ್ ಮಾತನಾಡಿ, ಸಮುದ್ರದ ಆಳದಲ್ಲಿ ಸಾಕಷ್ಟು ಖನಿಜ ಸಂಪತ್ತುಗಳಿದ್ದು, ಅವುಗಳನ್ನು ಹೊರತೆಗೆಯುವ ತಂತ್ರಜ್ಞಾನ ಇನ್ನೂ ಅಭಿವೃದ್ಧಿಗೊಂಡಿಲ್ಲ. ಇದರಿಂದ ದೇಶ ಸಾಕಷ್ಟು ಸಂಪನ್ಮೂಲಗಳ ಕೊರತೆಯನ್ನು ಎದುರಿಸುತ್ತಿದೆ. ಈ ಬಗ್ಗೆ ತಂತ್ರಜ್ಞಾನ ಇನ್ನಷ್ಟು ಬೆಳೆಯಬೇಕು.

ವಿಜ್ಞಾನಿಗಳು ಸಮುದ್ರದ ಆಳಕ್ಕೆ ಇಳಿಯುವ ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸಬೇಕು ಎಂದು ಹೇಳಿದರು.

ಸಮುದ್ರದ ನೀರನ್ನು ಶುದ್ಧ ನೀರಾಗಿ ಪರಿವರ್ತಿಸುವ ತಂತ್ರಜ್ಞಾನವು ಅಭಿವೃದ್ಧಿಗೊಳ್ಳಬೇಕು. ಆಗ ನಮ್ಮ ನೀರಿನ ಸಮಸ್ಯೆ ಪರಿಹಾರಗೊಳ್ಳಲಿದೆ ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಕೆ.ಎಸ್.ಸಿಯ ಅಧ್ಯಕ್ಷ ಪ್ರೊ. ಪಿ. ಕೃಷ್ಣ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಕುಲಪತಿ ಡಾ.ಎಚ್. ಮಹೇಶಪ್ಪ, ರಾಷ್ಟ್ರೀಯ ವಿನ್ಯಾಸ ಮತ್ತು ಸಂಶೋಧನಾ ವೇದಿಕೆಯ ಅಧ್ಯಕ್ಷ ಬಿ.ವಿ.ಎ.ರಾವ್, ಇಂಜಿನಿಯರ್ಸ್ ಸಂಸ್ಥೆಯ ಅಧ್ಯಕ್ಷ ಅಶೋಕ್ ಕುಮಾರ್ ಬಾಸಾ, ಡಾ.ಕೆ. ರಾಮಚಂದ್ರ ಮತ್ತಿತರರು ಹಾಜರಿದ್ದರು.

ಈ ಸಂಜೆ
ಬುಧವಾರ, 20 ಆಗಸ್ಟ್ 2014

# ಗಾಂಧೀಜಿ ಕುರಿತ ವಿಚಾರಗೋಷ್ಠಿ

ಬೆಂಗಳೂರು, ಆ.20- ಗಾಂಧಿ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿಯೋಗ ಪಬ್ಲಿಷಿಂಗ್ ಹೌಸ್ ಸಹಯೋಗದಲ್ಲಿ ಇದೇ 24ರಂದು ಮಹಾತ್ಮ ಗಾಂಧೀಜಿಯವರಿಗೆ ಪ್ರೇರಣೆ ನೀಡಿದ ಕೃತಿಗಳು ಕುರಿತ ವಿಚಾರ ಸಂಕಿರಣವನ್ನು ನಗರದ ಗಾಂಧಿ ಭವನದ ಆವರಣದಲ್ಲಿ ಹಮ್ಮಿಕೊಳ್ಳಲಾಗಿದೆ.

ಅಂದು ಬೆಳಗ್ಗೆ 11.30 ಗಂಟೆಗೆ ಟಾಲ್‌ಸ್ಟಾಯ್ ಮತ್ತು ಮಹಾತ್ಮ ಗಾಂಧಿ ಕುರಿತು ಡಾ.ಎಸ್.ಶಿವರಾಜಪ್ಪ ಉಪನ್ಯಾಸ ನೀಡುವರು, ಮಧ್ಯಾಹ್ನ 2 ಗಂಟೆಗೆ ಅನ್‌ಟು ದಿಸ್ ಲಾಸ್ಟ್ ಮತ್ತು ಮಹಾತ್ಮ ಗಾಂಧಿ ಕುರಿತು ಲೇಖಕ ಆಗುಂಬೆ ಎಸ್.ನಟರಾಜು, ಸಂಜೆ 4 ಗಂಟೆಗೆ ಶ್ರೀ ಭಗವದ್ಗೀತೆ ಮತ್ತು ಗಾಂಧಿ ಕುರಿತು ಪ್ರೊ.ಕೆ.ಎಸ್.ಕಣ್ಣನ್ ಉಪನ್ಯಾಸ ನೀಡಲಿದ್ದಾರೆ. ವೇದಾಂತ ವಿದ್ವಾಂಸ ಡಾ.ಕೆ.ಪಿ.ಸುಬ್ರಾಯ ಶರ್ಮ ಕಾರ್ಯಕ್ರಮ ಉದ್ಘಾಟಿಸಲಿದ್ದು, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಅಧ್ಯಕ್ಷತೆ ವಹಿಸಲಿದ್ದಾರೆ. ಅಭಿಮಾನಿ ಸಮೂಹದ ಸಂಸ್ಥೆಗಳ ವ್ಯವಸ್ಥಾಪಕ ನಿರ್ದೇಶಕ ಆರ್.ವೆಂಕಟೇಶ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಮುಖ್ಯ ಅತಿಥಿಗಳಾಗಿ ಭಾಗವಹಿಸಲಿದ್ದಾರೆ.

ಕರ್ನಾಟಕ ಬುಧವಾರ,20 ಆಗಸ್ಟ್ 2014

# 'ಗಾಂಧಿ ತತ್ತ್ವಗಳ ಅಳವಡಿಕೆ ಅಗತ್ಯ'

**ಬೆಂಗಳೂರು:** ಜಾಗತೀಕರಣದಿಂದ ಮಾನವೀಯತೆ, ಕುಟುಂಬ ಹಾಗೂ ಪ್ರಕೃತಿಯೊಂದಿಗಿನ ಸಂಬಂಧ ಕಳೆದುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಗಾಂಧಿ ತತ್ತ್ವಗಳ ಅಳವಡಿಕೆ ಅತ್ಯಗತ್ಯ ಎಂದು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವುಡೇ ಪಿ ಕೃಷ್ಣ ಅಭಿಪ್ರಾಯಪಟ್ಟರು.

ಬೆಂಗಳೂರು ವಕೀಲರ ಸಾಹಿತ್ಯ ಕೂಟ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಸಹಯೋಗದೊಂದಿಗೆ ನಗರದ ವಕೀಲರ ಭವನದಲ್ಲಿ ಸೋಮವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ಗಾಂಧಿ ವಿಚಾರಧಾರೆ-ವರ್ತಮಾನದಲ್ಲಿ ಒಂದು ಚಿಂತನೆ' ವಿಷಯ ಕುರಿತು ಅವರು ಮಾತನಾಡಿದರು.

''ಕೇವಲ ಪ್ರತಿಮೆಗಳನ್ನು ಸ್ಥಾಪಿಸಿ ರಸ್ತೆ ಹಾಗೂ ಸಂಘ-ಸಂಸ್ಥೆಗಳಿಗೆ ಗಾಂಧಿ ಹೆಸರಿಟ್ಟರೆ ಗೌರವ ತೋರಿಸಿದಂತಲ್ಲ, ಅವರ ತತ್ತ್ವ, ಆದರ್ಶಗಳನ್ನು ಪಾಲಿಸಬೇಕು. ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳಿಗೆ, ಯುವಜನರಿಗೆ ಗಾಂಧಿ ವಿಚಾರಧಾರೆಗಳನ್ನು ತಲುಪಿಸುವ ಕಾರ್ಯ ಆಗಬೇಕು,'' ಎಂದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ ವೆಂಕಟೇಶ್, ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ಕೆ ಎನ್ ಸುಬ್ಬಾರೆಡ್ಡಿ, ಗಾಂಧಿ ಶಾಂತಿ ಪ್ರತಿಷ್ಠಾನದ ಸಂಚಾಲಕ ಎಸ್ ವಿ ಶ್ರೀನಿವಾಸಮೂರ್ತಿ, ಬೆಂಗಳೂರು ವಕೀಲರ ಸಾಹಿತ್ಯ ಕೂಟದ ಅಧ್ಯಕ್ಷ ಸಿ ಪ್ರಕಾಶ್ ಮತ್ತಿತರರು ಉಪಸ್ಥಿತರಿದ್ದರು.

ಕರ್ನಾಟಕ
ಮಂಗಳವಾರ, 19 ಆಗಸ್ಟ್ 2014

# ಪ್ರಕೃತಿಯೊಂದಿಗೆ ಸಂಬಂಧ ಕಳೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಗಾಂಧಿ ತತ್ತ್ವಗಳ ಅಳವಡಿಕೆ ಅಗತ್ಯ: ಪ್ರೊ. ಪಿ ಕೃಷ್ಣ



## ವಿಚಾರಗೋಷ್ಠಿ ಉದ್ಘಾಟನೆ...

ಸಿಟಿ ಸಿವಿಲ್‌ಕೋರ್ಟ್‌ನ ವಕೀಲರ ಭವನದಲ್ಲಿ ಸೋಮವಾರ 'ಗಾಂಧಿ ವಿಚಾರಧಾರೆ-ವರ್ತಮಾನದಲ್ಲಿ ಒಂದು ಚಿಂತನೆ' ವಿಚಾರಗೋಷ್ಠಿಯಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ವಕೀಲರ ಸಂಘದ ಅಧ್ಯಕ್ಷ ಸುಬ್ಬಾರೆಡ್ಡಿ, ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

ಮಂಗಳವಾರ
19 ಆಗಸ್ಟ್ 2014
BANGALORE

ಸಂಯುಕ್ತ ಕರ್ನಾಟಕ

ಆಗಸ್ಟ್ | 13 | 2014 | ಬೆಂಗಳೂರು

# ಸ್ವದೇಶಿ ಉಪಗ್ರಹಕ್ಕೆ ಸಾರಾಬಾಯಿ ಕೊಡುಗೆ ಅಪಾರ

ಬೆಂಗಳೂರು, ಆ. 12: ಸ್ವದೇಶಿ ಉಪಗ್ರಹಗಳ ಉಡಾವಣೆಗೆ ವಿಜ್ಞಾನಿ ವಿಕ್ರಂ ಸಾರಾಬಾಯಿ ಅವರ ಕೊಡುಗೆ ಅಪಾರ ಎಂದು ವಿಜ್ಞಾನಿ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತ ಆರ್.ಎಂ. ವಾಸಗಮ್ ಅಭಿಪ್ರಾಯಪಟ್ಟರು.

ಭಾರತೀಯ ಅಭಿಯಂತರ ಕೇಂದ್ರದ ಸರ್.ಎಂ. ವಿಶ್ವೇಶ್ವರಯ್ಯ ಸಭಾಂಗಣದಲ್ಲಿ ಅಗಸ್ತ್ಯ ಅಂತಾರಾಷ್ಟ್ರೀಯ ಪ್ರತಿಷ್ಠಾನ, ರಾಜ್ಯ ಅಭಿಯಂತರರ ಕೇಂದ್ರ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹಯೋಗದಲ್ಲಿ ಆಯೋಜಿಸಿದ್ದ 'ಮಂಗಳಯಾನ ಹಾಗೂ ಖ್ಯಾತ ವಿಜ್ಞಾನಿ ವಿಕ್ರಂ ಸಾರಾಬಾಯಿ ಜನ್ಮ ದಿನಾಚರಣೆಯಲ್ಲಿ ಮಾತಾನಾಡಿದ ಅವರು, ವಿಜ್ಞಾನದ ಬೆಳವಣಿಗೆಯಲ್ಲಿ ನೂತನ ಪ್ರಯೋಗಗಳನ್ನು ಅಭಿವೃದ್ಧಿಪಡಿಸಿ ಉಪಗ್ರಹಗಳ ಉಡಾವಣೆಗೆ ಬಾಹ್ಯಕಾಶ ಕೇಂದ್ರಗಳ ಉತ್ತೇಜನಕ್ಕೆ ಸಹಕಾರಿಯಾದ ಮಹಾನ್ ವಿಜ್ಞಾನಿ ಎಂದು ಬಣ್ಣಿಸಿದರು.

ಮಂಗಳಯಾನ ಉಪಗ್ರಹದ ಮೂಲ ಆವಿಷ್ಕಾರದ ರಚನೆ, ವಿನ್ಯಾಸ ಹಾಗೂ ತಯಾರಿಕೆಯಲ್ಲಿ ವಿಕ್ರಂ ಸಾರಾಬಾಯಿ ಅವರ ಪ್ರಯೋಗಾತ್ಮಕ ಚಿಂತನೆಗಳಿದ್ದವು. ಹಲವು ವಿಜ್ಞಾನಿಗಳಿಗೆ ಸಲಹೆ ಸೂಚನೆ ನೀಡುತ್ತ ಉತ್ತಮ ಮಾರ್ಗದರ್ಶಕರಾಗಿ ಬಾಹ್ಯಕಾಶಗಳ ಯಶಸ್ವಿ ಉಡಾವಣೆಯಲ್ಲಿ ಅವರ ಪಾತ್ರ ಪ್ರಮುಖವಾಗಿರುತ್ತಿತ್ತು, ಅವರ ಹೊಸ ಅನ್ವೇಷಣೆಯ ಸೃಜನಾತ್ಮಕ ಚಿಂತನೆಗಳು ವಿಜ್ಞಾನ ಕ್ಷೇತ್ರಕ್ಕೆ ಬಹಳ ಕೊಡುಗೆ ನೀಡಿವೆ. ವಿಜ್ಞಾನ ವಿಷಯ ಅಧ್ಯಯನ ಮಾಡುವ ವಿದ್ಯಾರ್ಥಿಗಳು ಇಂತಹ ಮಹಾನ್ ವ್ಯಕ್ತಿಯ ಚಿತ್ರಣದ ಬಗ್ಗೆ ತಿಳಿದುಕೊಳ್ಳುವುದು ಸೂಕ್ತ ಎಂದು ಹೇಳಿದರು.



ವಿಜ್ಞಾನ ಕ್ಷೇತ್ರದ ಸಾಧನೆಗಳಿಂದ ಭಾರತ ವಿಶ್ವಾದ್ಯಂತ ಗುರುತಿಕೊಂಡು, ವಿಜ್ಞಾನ ಜಗತ್ತಿನಲ್ಲಿ ಉನ್ನತ ಮಟ್ಟಕ್ಕೆ ಬೆಳೆಯುತ್ತಿದೆ. ಈ ನಿಟ್ಟನಲ್ಲಿ ಸ್ವದೇಶಿ ವಿಜ್ಞಾನಿಗಳನ್ನು ಗುರುತಿಸಿ ಅವರ ಹೊಸ ಪ್ರಯೋಗಗಳಿಗೆ ಅವಕಾಶ ಕಲ್ಪಿಸಿ ವಿಜ್ಞಾನ ಕ್ಷೇತ್ರದಲ್ಲಿ ಹೊಸ ಮೈಲುಗಲ್ಲನ್ನು ಹಾಕುವಂತಹ ಯೋಜನೆಗಳು ರೂಪಿಸಬೇಕಾಗಿದೆ ಎಂದರು.

ಐಇ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ ಮಾತನಾಡಿ, ಜಾಗತಿಕ ಮಟ್ಟದ ಬೆಳವಣಿಗೆಯಲ್ಲಿ ವಿಜ್ಞಾನ ಕ್ಷೇತ್ರ ತೊಡಗಿಸಿಕೊಂಡಿದ್ದು, ತಾಂತ್ರಿಕ ಜಗತ್ತಿನ ಅನಾವರಣಕ್ಕೆ ಉತ್ತಮ ಕೊಡುಗೆ ನೀಡುವಲ್ಲಿ ಸಹಕಾರಿಯಾಗಲಿದೆ. ಈ ನಿಟ್ಟಿನಲ್ಲಿ ಅಧ್ಯಯನನಿರತ ವಿದ್ಯಾರ್ಥಿಗಳು ವಿಜ್ಞಾನದ ಬಗ್ಗೆ ಅರಿವು, ಕುತೂಹಲದ ಜೊತೆಗೆ ವಿಜ್ಞಾನ ಉಪಕರಣಗಳ ಬಗ್ಗೆ ಮಾಹಿತಿ ತಿಳಿದುಕೊಂಡು ಹೊಸ ಪ್ರಯೋಗಗಳ ಆವಿಷ್ಕಾರಕ್ಕೆ ಮುಂದಾಗಬೇಕು ಎಂದು ವಿದ್ಯಾರ್ಥಿಗಳಿಗೆ ಸಲಹೆ ನೀಡಿದರು.

ಅಗಸ್ತ್ಯ ಅಂತಾರಾಷ್ಟ್ರೀಯ ಪ್ರತಿಷ್ಠಾನದ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಅಜಿತ್ ಬಸು, ಇಸ್ರೋದ ಮಾಜಿ ವಿಜ್ಞಾನಿ ಡಾ. ಹೆಚ್. ಭೋಜರಾಜ್, ಸಂಸ್ಥೆಯ ಧರ್ಮದರ್ಶಿ ಮಹಾವೀರ ಕುಮಾರ್, ಮಂಗಳಯಾನ ಉಪ ಯೋಜನಾ ನಿರ್ದೇಶಕ ಡಾ. ಸತೀಶ್, ನಿವೃತ್ತ ಐಐಟಿ ಪ್ರೊ. ಪಾರ್ಥನ್ ಮತ್ತಿತರರು ಪಾಲ್ಗೊಂಡಿದ್ದರು.

'ಮಂಗಳಯಾನವು ಮಂಗಳನ ಕಕ್ಷೆ ಸೇರುವ ಸುಸಂದರ್ಭದ' ಕುರಿತು ಮಂಗಳಯಾನ ಉಪ ಯೋಜನಾ ನಿರ್ದೇಶಕ ಡಾ. ಸತೀಶ್ ಅವರು 250 ವಿದ್ಯಾರ್ಥಿಗಳಿಗೆ ಮಾಹಿತಿ ನೀಡಿದರು.

ವಿಜಯವಾಣಿ
• BANGALORE

ಬುಧವಾರ 13 ಆಗಸ್ಟ್ 2014 5

# ಮುಕ್ತಾಯ ಘಟ್ಟದಲ್ಲಿ ಮಂಗಳಯಾನ

## ☐ ಶೇ. 13 ಪಯಣ ಬಾಕಿ ☐ ಸೆ. 24ರಂದು ಕಕ್ಷೆಗೆ ಸೇರಲಿರುವ ಉಪಗ್ರಹ

ಬೆಂಗಳೂರು: ಮಂಗಳಯಾನ ಮುಕ್ತಾಯದ ಹಂತದಲ್ಲಿದ್ದು, ಉಪಗ್ರಹ ಮಂಗಳ ಗ್ರಹದ ಕಕ್ಷೆ ಸೇರಲು ಶೇ. 13 ಪಯಣವಷ್ಟೇ ಬಾಕಿ ಇದೆ ಎಂದು ಮಂಗಳಯಾನದ ಉಪ ಯೋಜನಾ ನಿರ್ದೇಶಕ ಡಾ. ಸತೀಶ್ ತಿಳಿಸಿದ್ದಾರೆ.

ಅಗಸ್ತ್ಯ ಅಂತಾರಾಷ್ಟ್ರೀಯ ಪ್ರತಿಷ್ಠಾನ, ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ ಸಭಾಂಗಣದಲ್ಲಿ ಮಂಗಳವಾರ ಏರ್ಪಡಿಸಿದ್ದ 'ಮಂಗಳಯಾನ ಕುರಿತ ಸಂವಾದ ಹಾಗೂ ವಿಜ್ಞಾನಿ ವಿಕ್ರಮ್ ಸಾರಾಭಾಯಿ ಜನ್ಮದಿನಾಚರಣೆ' ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಮಂಗಳಯಾನ 679 ದಶಲಕ್ಷ ಕಿ.ಮೀ. ದೂರದ್ದಾಗಿದ್ದು, ಪ್ರಸ್ತುತ ಸೆಕೆಂಡ್‌ಗೆ 22.3 ಕಿ.ಮೀ. ವೇಗದಲ್ಲಿ ಸಾಗುತ್ತಿದೆ. ಈಗ ಅದು 587 ದಶಲಕ್ಷ ಕಿ.ಮೀ. ದೂರ ಕ್ರಮಿಸಿದ್ದು, ಪೂರ್ವನಿಗದಿಯಂತೆ ಸ. 24ರಂದು ಮಂಗಳದ ಕಕ್ಷೆಗೆ ಸೇರಲಿದೆ. ಮಂಗಳಯಾನ ಯಶಸ್ವಿಯಾದರೆ ಈ ರೀತಿ ಸಾಧನೆ ಮಾಡಿದ 5ನೇ ರಾಷ್ಟ್ರ ಎಂಬ ಖ್ಯಾತಿಗೆ ಭಾರತ ಪಾತ್ರವಾಗಲಿದೆ ಎಂದು ತಿಳಿಸಿದರು.

ಸಂವಾದದಲ್ಲಿ ವಿದ್ಯಾರ್ಥಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿದ ಸತೀಶ್, ಮಂಗಳಯಾನ ಪ್ರತಿ ಹಂತ ದಾಟುವಾಗಲೂ ಅದರಿಂದ ಪ್ರತ್ಯೇಕಿಸಲ್ಪಡುವ ವಸ್ತುಗಳು ಸಾಗರದ ಮೇಲೇಯೇ ಬೀಳುವಂತೆ ರೂಪಿಸಲಾಗಿರುತ್ತದೆ. ಜತೆಗೆ ಆ ಸಮಯದಲ್ಲಿ ಆ ಪ್ರದೇಶದಲ್ಲಿ ಯಾವುದೇ ವಿಮಾನ ಅಥವಾ ಹಡಗು ಸಂಚರಿಸದಂತೆ ಕ್ರಮ ಕೈಗೊಳ್ಳಲಾಗಿರುತ್ತದೆ ಎಂದು ಸತೀಶ್ ತಿಳಿಸಿದರು.

ಮಂಗಳಯಾನದಿಂದ ಯಾವುದೇ ನಿರ್ದಿಷ್ಟ ಪ್ರಯೋಜನ ಇಲ್ಲದೆ ಇರಬಹುದು. ಆದರೆ ಅದು ದೇಶಕ್ಕೆ ತಂತ್ರಜ್ಞಾನದ ಹೆಮ್ಮೆ ಎನಿಸುವ ಜತೆಗೆ ಇತರ ಪ್ರಯೋಜನಗಳನ್ನು ಮಾಡಿಕೊಡಲಿದೆ. ಮಂಗಳಯಾನದ ಮೂಲಕ ಕಕ್ಷೆಗೆ ಸೇರಿದ ಉಪಗ್ರಹ ಅಂದಿನಿಂದ 6 ತಿಂಗಳು ಕಾರ್ಯನಿರ್ವಹಿಸಲಿದ್ದು, ಅಷ್ಟರೊಳಗೆ ನಮಗೆ ಬೇಕಾದ ಮಾಹಿತಿಗಳನ್ನು ರವಾನಿಸಲಿದೆ ಎಂದು ವಿವರಿಸಿದರು.

ವಿಜ್ಞಾನಿ ಆರ್.ಎಂ. ವಸಗಂ ಮಾತನಾಡಿ, ಬಹುಮುಖ ಪ್ರತಿಭೆಯ ವ್ಯಕ್ತಿಯಾಗಿದ್ದ ವಿಕ್ರಂ ಸಾರಾಭಾಯಿ ಶ್ರೀಮಂತ ಕುಟುಂಬದವರಾಗಿದ್ದರೂ ಸರಳತನ ರೂಢಿಸಿಕೊಂಡಿದ್ದರು ಎಂದರು.

10ಕ್ಕೂ ಅಧಿಕ ಶಾಲೆಗಳ 200 ಮಕ್ಕಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು. ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್‌ನ ಡಾ. ವೂಡೇ ಪಿ. ಕೃಷ್ಣ, ಪ್ರೊ. ಪಾರ್ಥನ್, ಇಸ್ರೋದ ಡಾ. ಎಚ್. ಭೋಜರಾಜ್ ಮತ್ತಿತರರು ಉಪಸ್ಥಿತರಿದ್ದರು.



ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್‌ನಲ್ಲಿ ಮಂಗಳವಾರ 'ಮಂಗಳಯಾನ ಕುರಿತ ಸಂವಾದ ಹಾಗೂ ವಿಕ್ರಮ್ ಸಾರಾಭಾಯಿ ಜನ್ಮದಿನಾಚರಣೆಯಲ್ಲಿ ಡಾ. ಆರ್.ಎ. ಸತೀಶ್, ಡಾ. ವೂಡೇ ಪಿ. ಕೃಷ್ಣ, ಮಹಾವೀರ್ ಕುಮಾರ್, ಡಾ. ಮುರಳಿಕೃಷ್ಣ ರೆಡ್ಡಿ ಭಾಗವಹಿಸಿದ್ದರು.



ವಿಜ್ಞಾನ ಪ್ರದರ್ಶನ ವೀಕ್ಷಿಸುತ್ತಿರುವ ವಿದ್ಯಾರ್ಥಿಗಳು.

ಉದಯವಾಣಿ
ಬುಧವಾರ | ಆಗಸ್ಟ್ | 13 | 2014

# ಮಂಗಳಯಾನ ಕುರಿತು ಇಸ್ರೋ ವಿಜ್ಞಾನಿಗಳು, ವಿದ್ಯಾರ್ಥಿಗಳ ಸಂವಾದ



ಬೆಂಗಳೂರು: ಆಗಸ್ತ್ಯ ಅಂತಾರಾಷ್ಟ್ರೀಯ ಪ್ರತಿಷ್ಠಾನ ಡಾ.ವಿಕ್ರಮ ಸಾರಾಬಾಯಿ ಜನ್ಮದಿನ ಅಂಗವಾಗಿ ಮಂಗಳಯಾನ ಕುರಿತು ಇಸ್ರೋ ವಿಜ್ಞಾನಿಗಳು ಹಾಗೂ ವಿದ್ಯಾರ್ಥಿಗಳೊಂದಿಗೆ ಸಂವಾದ ಕಾರ್ಯಕ್ರಮ ಏರ್ಪಡಿಸಿತ್ತು.

ಪದ್ಮಶ್ರೀ ಪುರಸ್ಕೃತ ಆರ್.ಎಂ. ವಾಸಗಮ ಅವರು ಡಾ.ವಿಕ್ರಮ ಸಾರಾಬಾಯಿ ಅವರ ಜೀವನ ಚರಿತ್ರೆ ಹಾಗೂ ಭಾರತವು ಬಾಹ್ಯಕಾಶ ಕ್ಷೇತ್ರದಲ್ಲಿ ಸ್ವಾವಲಂಬಿ ಸದೃಢ ರಾಷ್ಟ್ರವಾಗಿ ಬೆಳೆಯುವಲ್ಲಿ ಅವರ ಪರಿಶ್ರಮ, ಕಾರ್ಯದಕ್ಷತೆ ಬಗ್ಗೆ ವಿವರಿಸಿದರು.

ಇಸ್ರೋ ಮಂಗಳಯಾನ ಯೋಜನಾ ಉಪನಿರ್ದೇಶಕ ವಿಜ್ಞಾನಿ ಡಾ. ಸತೀಶ್, ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ಮೂಲಕ ಮಂಗಳಯಾನದ ಕುರಿತು ಮಾಹಿತಿ ನೀಡಿದರು. ಬೆಂಗಳೂರು, ರಾಮನಗರ ಹಾಗೂ ತುಮಕೂರು ಜಿಲ್ಲೆಗಳ 20 ಸರ್ಕಾರಿ ಶಾಲೆಗಳ 300ಕ್ಕೂ ಹೆಚ್ಚು ವಿದ್ಯಾರ್ಥಿಗಳು, ಶಿಕ್ಷಕರು ಹಾಗೂ ಎಂಜಿನಿಯರಿಂಗ್ ಕಾಲೇಜು ವಿದ್ಯಾರ್ಥಿಗಳು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಆಗಸ್ತ್ಯ ಅಂತಾರಾಷ್ಟ್ರೀಯ ಪ್ರತಿಷ್ಠಾನದ ಮುಖ್ಯಸ್ಥ ಮಹಾವೀರ್ ಕುಮಾರ್ ಸೇರಿದಂತೆ ಹಲವರು ಭಾಗವಹಿಸಿದ್ದರು.

ಪ್ರಜಾವಾಣಿ

ಬುಧವಾರ
13ನೇ ಆಗಸ್ಟ್ 2014

# ‘ವಿಜ್ಞಾನಿಗಳ ಜೀವನ ಚರಿತ್ರೆ ಓದಲಿ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಶಾಲೆಗಳಲ್ಲಿ ಬಾಹ್ಯಾಕಾಶ ವಿಜ್ಞಾನ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರಾಯೋಗಿಕ ಬೋಧನೆ ಹಾಗೂ ಚರ್ಚಾ ವಿಧಾನಗಳ ಮೂಲಕ ವಿದ್ಯಾರ್ಥಿಗಳಿಗೆ ತಿಳಿಸಿಕೊಡಬೇಕು’ ಎಂದು ಎಂಜಿನಿಯರುಗಳ ಸಂಸ್ಥೆಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಹೇಳಿದರು.

ಅಗಸ್ತ್ಯ ಅಂತರರಾಷ್ಟ್ರೀಯ ಪ್ರತಿಷ್ಠಾನ ಹಾಗೂ ಎಂಜಿನಿಯರುಗಳ ಸಂಸ್ಥೆಗಳು ಜಂಟಿಯಾಗಿ ನಗರದ ಸರ್.ಎಂ. ವಿಶ್ವೇಶ್ವರಯ್ಯ ಸಭಾಂಗಣದಲ್ಲಿ ಏರ್ಪಡಿಸಿದ್ದ ವಿಕ್ರಮ್ ಸಾರಾಬಾಯಿ ಅವರ 95ನೇ ಜನ್ಮದಿನಾಚರಣೆಯಲ್ಲಿ ಅವರು ಮಾತನಾಡಿದರು.

‘ವಿಜ್ಞಾನಿಗಳ ಜೀವನ ಚರಿತ್ರೆಯನ್ನು ಓದುವುದಕ್ಕೆ ಮಕ್ಕಳಿಗೆ ಪೋಷಕರು ಪ್ರೋತ್ಸಾಹ ನೀಡಬೇಕು’ ಎಂದು ಹೇಳಿದರು.

ಇಸ್ರೊ ವಿಜ್ಞಾನಿ ಮತ್ತು ಮಂಗಳಯಾನ ಯೋಜನೆಯ ಉಪನಿರ್ದೇಶಕ ಡಾ.ಸತೀಶ್ ಮಂಗಳಯಾನದ ಬಗ್ಗೆ ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆಯ ಮೂಲಕ ವಿವರಣೆ ನೀಡಿದರು.

‘ವಿಶ್ವದ ಬೆರಳೆಣಿಕೆ ದೇಶಗಳು ಮಾತ್ರ ಮಂಗಳಗ್ರಹಕ್ಕೆ ಲಗ್ಗೆ ಇಟ್ಟಿವೆ. ಆ ಸಾಲಿನಲ್ಲಿ ಭಾರತ ದೇಶವು ಸೇರುತ್ತಿರುವುದು ಹೆಮ್ಮೆಯ ವಿಷಯ. ಭಾರತದ ಗಗನನೌಕೆಯು ಸೆ. 24ರಂದು ಮಂಗಳಗ್ರಹದ ಕಕ್ಷೆಗೆ ಸೇರಲಿದೆ. ನೌಕೆಯು ನಿರೀಕ್ಷಿತ ವೇಗದಲ್ಲಿ ಚಲಿಸುತ್ತಿದ್ದು, ಆತಂಕಪಡುವ ಅಗತ್ಯವಿಲ್ಲ. ಯೋಜನೆ ಯಶಸ್ವಿಯಾಗಲಿದೆ’ ಎಂದರು.

ಕಾರ್ಯಕ್ರಮದಲ್ಲಿ 300ಕ್ಕೂ ಹೆಚ್ಚು ಶಾಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಅಗಸ್ತ್ಯ ಅಂತರರಾಷ್ಟ್ರೀಯ ಪ್ರತಿಷ್ಠಾನದ ಮುಖ್ಯಸ್ಥ ಎಫ್.ಮಹಾವೀರ್ ಕುಮಾರ್, ಪ್ರೊ. ಪಾರ್ಥನ್ ಮತ್ತಿತರರು ಹಾಜರಿದ್ದರು.



ಅಗಸ್ತ್ಯ ಅಂತರರಾಷ್ಟ್ರೀಯ ಪ್ರತಿಷ್ಠಾನ ಹಾಗೂ ಎಂಜಿನಿಯರುಗಳ ಸಂಸ್ಥೆಗಳು ಜಂಟಿಯಾಗಿ ನಗರದಲ್ಲಿ ಮಂಗಳವಾರ ಏರ್ಪಡಿಸಿದ್ದ ವಿಕ್ರಮ್ ಸಾರಾಬಾಯಿ ಅವರ 95ನೇ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳು ‘ಲ್ಯಾಟರಲ್ ಶಿಫ್ಟ್’ ಉಪಕರಣವನ್ನು ವೀಕ್ಷಿಸಿದರು

ಈ ಸಂಜೆ
ಮಂಗಳವಾರ,12-08-2014



ಅಗಸ್ತ್ಯ ಅಂತರರಾಷ್ಟ್ರೀಯ ಫೌಂಡೇಶನ್ ವತಿಯಿಂದ ನಗರದ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ಮಂಗಳಯಾನದ ಬಗೆಗಿನ ಚರ್ಚೆ ಮತ್ತು ಡಾ.ವಿಕ್ರಮ್ ಸಾರಾಬಾಯಿ ಹುಟ್ಟುಹಬ್ಬದ ಆಚರಣೆ ಕಾರ್ಯಕ್ರಮವನ್ನು ಡಾ.ಪೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಂಗಳಯಾನದ ಉಪನಿರ್ದೇಶಕ ಇಂ||ಆರ್.ಸತೀಶ್ ಮತ್ತಿತರರು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಮಕ್ಕಳು ವಿಜ್ಞಾನ ಪ್ರಯೋಗಗಳನ್ನು ಪ್ರದರ್ಶಿಸಿದರು.

ಬೆಂಗಳೂರು | ಭಾನುವಾರ, 10 ಆಗಸ್ಟ್ 2014

# 2019ಕ್ಕೆ ಬಯಲು ಶೌಚ ಮುಕ್ತ

## ಸಚಿವ ಎಚ್.ಕೆ. ಪಾಟೀಲ್ ಘೋಷಣೆ

ಬೆಂಗಳೂರು: ರಾಜ್ಯವನ್ನು 2019ಕ್ಕೆ ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡುವುದಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್ ಘೋಷಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನ ಸೇರಿದಂತೆ ವಿವಿಧ ಸಂಸ್ಥೆಗಳ ಸಹಯೋಗದಲ್ಲಿ ಶನಿವಾರ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ 'ಕ್ವಿಟ್ ಇಂಡಿಯಾ ಚಳವಳಿ- ಒಂದು ನೆನಪು ಮತ್ತು ಹಿಂದ್ ಸ್ವರಾಜ್' ಪುನರಾವಲೋಕನ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

2019ಕ್ಕೆ ಗಾಂಧೀಜಿ 150ನೇ ಜನ್ಮ ದಿನದ ವರ್ಷಾಚರಣೆ ನಡೆಯಲಿದೆ. ಈ ಹೊತ್ತಿಗೆ ರಾಜ್ಯವನ್ನು ಬಯಲು ಬಹಿರ್ದೆಸೆ ಮುಕ್ತರಾಜ್ಯವನ್ನಾಗಿ ಮಾಡಿದರೆ, ಗಾಂಧಿಯವರ ಗ್ರಾಮ ಸ್ವರಾಜ್ಯದ ಕನಸು ಮತ್ತು ನಂಬಿಕೆಗಳನ್ನು ನಿಜವಾಗಿಯೂ ಗೌರವಿಸಿದಂತಾಗಲಿದೆ. ಈ ನಿಟ್ಟಿನಲ್ಲಿ ಸರ್ಕಾರ, 2019ರ ಒಳಗಾಗಿ ರಾಜ್ಯವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡಲು ನಿರ್ಧರಿಸಿದೆ ಎಂದು ಸ್ಪಷ್ಟಪಡಿಸಿದರು.

ಉದ್ದೇಶಿತ ಈ ಕಾರ್ಯಕ್ರಮದ ಅನುಷ್ಠಾನ ಕೇವಲಸರ್ಕಾರದಿಂದಮಾತ್ರಸಾಧ್ಯವಾಗುವುದಿಲ್ಲ, ಸಾರ್ವಜನಿಕರು, ವಿಶೇಷವಾಗಿ ಯುವಕರಸಹಕಾರ ಅಗತ್ಯವಾಗಿದೆ ಎಂದು ಮನವಿ ಮಾಡಿದರು.

ವಿಧಾನಸೌಧ ಹಾಗೂ ವಿಕಾಸ ಸೌಧಗಳ ಮಧ್ಯೆದಲ್ಲಿ ಸ್ಥಾಪಿಸಲುದ್ದೇಶಿಸಿರುವ ಧ್ಯಾನಸ್ಥ ಗಾಂಧಿಪ್ರತಿಮೆ, ಅಕ್ಟೋಬರ್ 2 ರಂದು ನಡೆಯುವ ಗಾಂಧಿಜಯಂತಿದಿನದಂದುಅನಾವರಣಗೊಳ್ಳಲಿದೆ. ಇದಕ್ಕೆ ಎಲ್ಲ ರೀತಿಯ ಸಿದ್ಧತೆ ನಡೆದಿದೆ ಎಂದು ಅವರು ಹೇಳಿದರು. ಇದೇ ವೇಳೆ, ಲೇಖಕ ವೇಮಗಲ್ ಸೋಮಶೇಖರ್ ಅವರ 'ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ' ಹಾಗೂ ವಿನೋಬ ವಿರಚಿತ 'ಮೃತ್ಯು' ಕೃತಿಗಳನ್ನು ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಲೋಕಾರ್ಪಣೆಗೊಳಿಸಿದರು. ವಾರ್ತಾ ಇಲಾಖೆ ನಿರ್ದೇಶಕ ವಿಶುಕುಮಾರ್, ಸಮಾಜವಾದಿ ಚಿಂತಕ ಡಿ.ಎಸ್.ನಾಗಭೂಷಣ ಭಾಗವಹಿಸಿದ್ದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ ಅಧ್ಯಕ್ಷತೆ ವಹಿಸಿದ್ದರು.



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ವತಿಯಿಂದ ಹಮ್ಮಿಕೊಂಡಿದ್ದ 'ಕ್ವಿಟ್ ಇಂಡಿಯಾ ಚಳವಳಿ' ಒಂದು ನೆನಪು ಮತ್ತು ' ಹಿಂದ್ ಸ್ವರಾಜ್' ಪುನರಾವಲೋಕನ ಕಾರ್ಯಕ್ರಮವನ್ನು ಸಚಿವ ಎಚ್.ಕೆ. ಪಾಟೀಲ್ ಚರಕ ತಿರುಗಿಸುವ ಉದ್ಘಾಟಿಸಿದರು. ಹೊ. ಶ್ರೀನಿವಾಸಯ್ಯ, ವಿಶುಕುಮಾರ್, ಡಾ. ವೂಡೇ ಪಿ.ಕೃಷ್ಣ ಇದ್ದರು.

ವಿಜಯವಾಣಿ
• BANGALORE
ಭಾನುವಾರ
10 ಆಗಸ್ಟ್ 2014

# 2019ಕ್ಕೆ ಬಯಲು ಶೌಚಮುಕ್ತವಾಗಲಿದೆ ಕರ್ನಾಟಕ

## ■ ಎಲ್ಲ ಹಳ್ಳಿಗಳಲ್ಲೂ ಶುದ್ಧ ಕುಡಿಯುವ ನೀರು: ಎಚ್.ಕೆ. ಪಾಟೀಲ್ ಭರವಸೆ

ಬೆಂಗಳೂರು: ಮಹಾತ್ಮ ಗಾಂಧಿ ಜನಿಸಿ 150 ವರ್ಷಗಳಾಗುವ 2019ರ ವೇಳೆಗೆ ಕರ್ನಾಟಕವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡಲಾಗುವುದು ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ. ಪಾಟೀಲ್ ಶನಿವಾರ ತಿಳಿಸಿದರು.

ಗಾಂಧೀಜಿಯವರ ಕನಸಾಗಿದ್ದ ಗ್ರಾಮ ಸ್ವರಾಜ್ಯವನ್ನು ಸಾಕಾರಗೊಳಿಸಲು ನೈರ್ಮಲ್ಯದ ಜತೆಗೆ, ಎಲ್ಲ ಹಳ್ಳಿಗಳಲ್ಲೂ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸಲು ಸರ್ಕಾರ ಶ್ರಮಿಸುತ್ತಿದೆ ಎಂದು ಗಾಂಧೀ ಸ್ಮಾರಕ ನಿಧಿ, ಗಾಂಧೀ ಶಾಂತಿ ಪ್ರತಿಷ್ಠಾನ, ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಆಶ್ರಯದಲ್ಲಿ ಆಯೋಜಿಸಿದ್ದ 'ಕ್ವಿಟ್ ಇಂಡಿಯಾ ಚಳವಳಿ: ಒಂದು ನೆನಪು, ಹಿಂದ್ ಸ್ವರಾಜ್ ಪುನರಾವಲೋಕನ ಹಾಗೂ ನರಸಿಂಹ ದಾಬಡೆ ಪ್ರಶಸ್ತಿ ಪ್ರದಾನ ಸಮಾರಂಭ'ದಲ್ಲಿ ತಿಳಿಸಿದರು.



ಕ್ವಿಟ್ ಇಂಡಿಯಾ ಚಳವಳಿ: ಒಂದು ನೆನಪು ಕಾರ್ಯಕ್ರಮದಲ್ಲಿ ಸಚಿವ ಎಚ್. ಕೆ. ಪಾಟೀಲ್, ವಿಶುಕುಮಾರ್, ವೂಡೇ ಪಿ.ಕೃಷ್ಣ, ಡಾ. ಹೊ.ಶ್ರೀನಿವಾಸಯ್ಯ ಇದ್ದರು.

ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಮಾತನಾಡಿ, ಯುವಕರಲ್ಲಿ ಬದುಕುವ ಪ್ರೇರಣೆ ಕಡಿಮೆಯಾಗಿದೆ. ಸಣ್ಣಪುಟ್ಟ ಕಾರಣಗಳಿಗೆ ಆತ್ಮಹತ್ಯೆ, ಕೊಲೆಗೆ ಮುಂದಾಗುತ್ತಿದ್ದಾರೆ. ಬದುಕನ್ನು ಪ್ರೀತಿಸಬೇಕು ಎಂದು ಸಲಹೆ ನೀಡಿದರು.

ವಿನೋಬಾ ಭಾವೆ ರಚಿತ 'ಮೃತ್ಯು' ಹಾಗೂ ವೇಮಗಲ್ ಸೋಮಶೇಖರ ರಚಿಸಿದ 'ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧೀ' ಕೃತಿಗಳನ್ನು ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಲೋಕಾರ್ಪಣೆಗೊಳಿಸಿದರು.

ಚಿಂತಕ ಡಿ.ಎಸ್.ನಾಗಭೂಷಣ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್.ಆರ್. ವಿಶುಕುಮಾರ್ ಮತ್ತಿತರರಿದ್ದರು. ಗ್ರಾಮ ಸ್ವರಾಜ್ಯ, ಕ್ವಿಟ್ ಇಂಡಿಯಾ ಚಳವಳಿ ಕುರಿತು ವಿಚಾರಸಂಕಿರಣ ನಡೆಯಿತು.

ಉದಯವಾಣಿ
ಭಾನುವಾರ | ಆಗಸ್ಟ್ | 10 | 2014

ಕನಸು ನನಸು

# 2019ಕ್ಕೆ ರಾಜ್ಯ 'ಬಯಲು ಶೌಚಾಲಯ' ಮುಕ್ತ

## ■ ಗಾಂಧೀಜಿಯವರ 150ನೇ ಜನ್ಮ ವರ್ಷಾಚರಣೆಗೆ ರಾಜ್ಯ ಸರ್ಕಾರದ ಕೊಡುಗೆ: ಪಾಟೀಲ್

ಬೆಂಗಳೂರು: ಮಹಾತ್ಮ ಗಾಂಧೀಜಿ ಅವರ ಕನಸಿನಂತೆ ಕರ್ನಾಟಕವನ್ನು 2019ರ ವೇಳೆಗೆ 'ಬಯಲು ಶೌಚಾಲಯ' ಮುಕ್ತ ರಾಜ್ಯವನ್ನಾಗಿ ಮಾಡಲು ಸರ್ಕಾರ ಪಣ ತೊಟ್ಟಿದೆ ಎಂದು ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ ಸಚಿವ ಎಚ್.ಕೆ. ಪಾಟೀಲ್ ಹೇಳಿದ್ದಾರೆ.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ ಶನಿವಾರ ನಗರದ ಗಾಂಧೀಭವನದಲ್ಲಿ ಏರ್ಪಡಿಸಿದ್ದ 'ಕ್ವಿಟ್ ಇಂಡಿಯಾ ಚಳವಳಿ: ಒಂದು ನೆನಪು' ಹಾಗೂ 'ಹಿಂದ್ ಸ್ವರಾಜ್ ಪುನರಾವಲೋಕನ' ಕಾರ್ಯಕ್ರಮವನ್ನು ಅವರು ಉದ್ಘಾಟಿಸಿದರು.

ಗ್ರಾಮೀಣ ಪ್ರದೇಶಗಳನ್ನು ಬಯಲು ಶೌಚಾಲಯ ಮುಕ್ತಗೊಳಿಸಿ ಹೆಣ್ಣುಮಕ್ಕಳಿಗೆ ಗೌರವಯುತ ಜೀವನ ನಡೆಸುವ ವಾತಾವರಣ ಕಲ್ಪಿಸಬೇಕು ಎಂಬುದು ಗಾಂಧೀಜಿ ಅವರ ಕನಸಾಗಿತ್ತು. 2019ರಲ್ಲಿ ಅವರ 150ನೇ ಜನ್ಮ ವರ್ಷಾಚರಣೆ ನಡೆಯಲಿದ್ದು ಈ ವೇಳೆಗೆ ಕರ್ನಾಟಕವು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡಲು ಸರ್ಕಾರ ಇಚ್ಛಾಶಕ್ತಿ ಪ್ರದರ್ಶಿಸಲಿದೆ. ಈ ನಿಟ್ಟಿನಲ್ಲಿ ಯುವಜನತೆ ಹಾಗೂ ಸಮಾಜ ಸರ್ಕಾರಕ್ಕೆ ಸಹಕಾರ ನೀಡಬೇಕು ಎಂದು ಕೋರಿದರು.

ನೈತಿಕ ಮೌಲ್ಯ ಕುಸಿತ: ಸ್ವಾತಂತ್ರ್ಯಾನಂತರ ದೇಶ ಭೌತಿಕವಾಗಿ ಮುಂದುವರಿದಿದ್ದರೂ ನೈತಿಕವಾಗಿ ಅಧಃಪತನ ಕಂಡಿದೆ. ಸತ್ಯಪ್ರತಿಪಾದಕರು, ರಾಜಕಾರಣಿಗಳು, ಸ್ವಯಂಸೇವಕರು ತಮ್ಮ ಮೌಲ್ಯ ಕಳೆದುಕೊಂಡಿದ್ದಾರೆ. ಹೀಗಾಗಿ ಗಾಂಧೀ ದೃಷ್ಟಿಕೋನವನ್ನೇ ಅಸ್ತ್ರವನ್ನಾಗಿ ಮಾಡಿಕೊಂಡು ಸಮಾಜದಲ್ಲಿ ನೈತಿಕ ಮೌಲ್ಯಗಳ ಪುನರ್‌ಪ್ರತಿಷ್ಠಾಪನೆಗೆ ಯತ್ನ ಮಾಡಬೇಕಿದೆ ಎಂದರು. ಪ್ರಸ್ತುತ ಹೋರಾಟಗಳು ಹೋರಾಟಗಾರರ ವೈಯಕ್ತಿಕ ಲಾಭ ಹಾಗೂ ಹಿತಾಸಕ್ತಿಗಳಿಗಾಗಿ ನಡೆಯುತ್ತಿವೆ. ಸಮಾಜದ ಹಿತದೃಷ್ಟಿಯಿಂದ ಹೋರಾಟ ಮಾಡುವವರು ಕಡಿಮೆಯಾಗಿದ್ದಾರೆ. ಸ್ವಾರ್ಥ, ಹೋರಾಟ ಮಾಡಿ ಜೈಲಿಗೆ ಹೋದರೂ ಐಷಾರಾಮಿ ಜೀವನ ನಡೆಸುತ್ತಿದ್ದಾರೆ. ಹೀಗಾಗಿ ಹೋರಾಟಗಳ ಪ್ರಭಾವ ಕ್ಷೀಣಿಸುತ್ತಿದೆ. ಆದರೆ, ಬ್ರಿಟೀಷರ ಕಾಲದಲ್ಲಿ ಹೋರಾಟಕ್ಕೆ ಹೋದವರು ಮರಳಿ ಮನೆಗೆ ಬರುತ್ತಾರೆ ಎಂಬ ನಂಬಿಕೆ ಅವರಿಗೂ ಇರಲಿಲ್ಲ. ಕುಟುಂಬಕ್ಕೂ ಇರಲಿಲ್ಲ. ಏಕೆಂದರೆ, ಅದು ಸಮಾಜಕ್ಕಾಗಿ ನಡೆದ ಹೋರಾಟ ಎಂದರು.

ಕಲುಷಿತ ನೀರು ಗಂಭೀರ ಸಮಸ್ಯೆ: ಗ್ರಾಮೀಣ ಹಾಗೂ ನಗರ ಪ್ರದೇಶದ ಮಧ್ಯಮ, ಹಿಂದುಳಿದ ವರ್ಗದವರು ಕಚ್ಚಾ ನೀರನ್ನೇ ಕುಡಿಯುತ್ತಿದ್ದಾರೆ. ಬಹುತೇಕ ಭಾಗಗಳಲ್ಲಿ ಅಂತರ್ಜಲ ಕಲುಷಿತವಾಗಿದ್ದು, ಕಲುಷಿತ ನೀರು ಸೇವನೆಯಿಂದ ದೇಶದಲ್ಲಿ ಪ್ರತಿ 20 ಸೆಕೆಂಡ್‌ಗೆ ಒಂದು ಮಗು ಸಾವನ್ನಪ್ಪುತ್ತಿದೆ. ಇದಕ್ಕಿಂತ ಗಂಭೀರ ಸಮಸ್ಯೆ ಮತ್ತೊಂದಿಲ್ಲ. ಹೀಗಾಗಿ ನಮ್ಮ ದೇಶದಲ್ಲಿ ಶುದ್ಧ ನೀರು ಎಲ್ಲರಿಗೂ ದೊರೆಯುವಂತೆ ಮಾಡಬೇಕಿದೆ ಎಂದರು. ಕಾರ್ಯಕ್ರಮದಲ್ಲಿ 'ಮೃತ್ಯು' ಹಾಗೂ ಪೇಮಗಲ್ ಸೋಮಶೇಖರ್ ಅವರ 'ನಂದಿ ಗಿರಿಧಾಮದಲ್ಲಿ ಮಹಾತ್ಮಗಾಂಧಿ' ಎಂಬ ಕೃತಿಗಳನ್ನು ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಲೋಕಾರ್ಪಣೆ ಮಾಡಿದರು. ಸಮಾಜವಾದಿ ಚಿಂತಕ ಡಿ.ಎಸ್. ನಾಗಭೂಷಣ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್. ವಿಶುಕುಮಾರ್, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಗಾಂಧೀಭವನ ಗೌರವ ಕಾರ್ಯದರ್ಶಿ ಪ್ರೊ. ಜಿ.ಬಿ. ಶಿವರಾಜು ಹಾಜರಿದ್ದರು.



ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ ಶನಿವಾರ ನಗರದ ಗಾಂಧಿಭವನದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮವನ್ನು ಸಚಿವ ಎಚ್.ಕೆ. ಪಾಟೀಲ್ ಉದ್ಘಾಟಿಸಿದರು. ಡಿ.ಎಸ್. ನಾಗಭೂಷಣ, ಡಾ. ಹೊ. ಶ್ರೀನಿವಾಸಯ್ಯ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್. ವಿಶುಕುಮಾರ್, ಡಾ. ವೂಡೇ ಪಿ. ಕೃಷ್ಣ ಇದ್ದರು.

ಪ್ರಜಾವಾಣಿ

ಭಾನುವಾರ
10ನೇ ಆಗಸ್ಟ್ 2014

## ‘ಕ್ವಿಟ್ ಇಂಡಿಯಾ’ ಚಳವಳಿಯ ನೆನಪು, ‘ಹಿಂದ್ ಸ್ವರಾಜ್’ ಪುನರಾವಲೋಕನ

# ಬಯಲು ಬಹಿರ್ದೆಸೆ ಮುಕ್ತ ರಾಜ್ಯದ ಗುರಿ

**ಪ್ರಜಾವಾಣಿ ವಾರ್ತೆ**

**ಬೆಂಗಳೂರು:** ‘2019ರಲ್ಲಿ ಮಹಾತ್ಮ ಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ನಡೆಯಲಿದೆ. ಆ ವೇಳೆಗೆ ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿಸುವುದು ಸರ್ಕಾರದ ಗುರಿ. ಇದಕ್ಕಾಗಿ ನಾವು ಪಣ ತೊಟ್ಟಿದ್ದೇವೆ. ಈ ಪ್ರಯತ್ನಕ್ಕೆ ಸಮಾಜ ಕೂಡ ಕೈ ಜೋಡಿಸಬೇಕು’ ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್ ಹೇಳಿದರು.

ನಗರದಲ್ಲಿ ಶನಿವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ, ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಆಯೋಜಿಸಿದ್ದ ‘ಕ್ವಿಟ್ ಇಂಡಿಯಾ’ ಚಳವಳಿಯ ನೆನಪು ಮತ್ತು ‘ಹಿಂದ್ ಸ್ವರಾಜ್’ ಪುನರಾವಲೋಕನ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

‘ಎಷ್ಟೋ ಜನರಿಗೆ ಕುಡಿಯಲು ಶುದ್ಧ ನೀರು ಸಿಗುತ್ತಿಲ್ಲ. ಶ್ರಮಿಕರು ಕೆರೆ, ಕೊಳ್ಳ, ಕೊಳವೆ ಬಾವಿ ನೀರು ಕುಡಿದು ಬದುಕುತ್ತಿದ್ದಾರೆ. ಕಲುಷಿತ ನೀರು ಸೇವನೆಯಿಂದ ಮಕ್ಕಳು ಸಾವನ್ನಪ್ಪುತ್ತಿವೆ. ಪೌಷ್ಟಿಕಾಂಶ ಆಹಾರವಿಲ್ಲದೇ ಸೊರಗುತ್ತಿವೆ. ಇನ್ನೊಂದೆಡೆ, ಹಣವುಳ್ಳವರು ಖನಿಜಯುಕ್ತ ಹಾಗೂ ಗುಣಮಟ್ಟದ ನೀರು ಕುಡಿಯುತ್ತಿದ್ದಾರೆ. ಈ ವಿಷಯದಲ್ಲಿಯೇ ಸಮಾಜದಲ್ಲಿ ಅಸಮಾನತೆ ಇದೆ. ಇಂಥ ಪರಿಸ್ಥಿತಿ ಇದ್ದಾಗ ನಾವು ಏನೇ ಮಾಡಿದರೂ ಗಾಂಧಿ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ’ ಎಂದು ಬೇಸರ ವ್ಯಕ್ತಪಡಿಸಿದರು.

ಸಮಾಜವಾದಿ ಚಿಂತಕ ಡಿ.ಎಸ್.ನಾಗಭೂಷಣ ಮಾತನಾಡುತ್ತಾ, ಆಧುನಿಕ ನಾಗರಿಕತೆಯನ್ನು ಗಾಂಧೀಜಿ ಏಕೆ ದ್ವೇಷಿಸುತ್ತಿದ್ದರು ಎಂಬುದನ್ನು ಅವರು ಬಿಚ್ಚಿಟ್ಟರು.

‘ಆಧುನಿಕ ನಾಗರಿಕತೆ ದೇಹ ಸುಖವನ್ನು ನೀಡುವಂಥದ್ದು. ಅದು ದುರಾಸೆ, ದಾಹ, ಧಾವಂತ ಹಾಗೂ ಭೋಗವನ್ನು ಮನುಷ್ಯನ ಮನಸ್ಸಿನಲ್ಲಿ ತುಂಬುತ್ತಿದೆ. ಬ್ರಿಟಿಷರ ಪ್ರಭುತ್ವವು ಇಂಥ ನಾಗರಿಕತೆಯ ಪ್ರತೀಕವಾಗಿತ್ತು. ಬ್ರಿಟಿಷರು ದೈಹಿಕವಾಗಿ ಹೊರಹೋಗಿರಬಹುದು. ಆದರೆ, ಅವರು ಸ್ಥಾಪಿಸಿದ ಪ್ರಭುತ್ವ ಹಾಗೇ ಉಳಿದಿದೆ’ ಎಂದು ಆತಂಕ ವ್ಯಕ್ತಪಡಿಸಿದರು.

‘ಇದೇ ಕಾರಣಕ್ಕಾಗಿ ಗಾಂಧೀಜಿಯವರು ಗ್ರಾಮದ ಪರಿಕಲ್ಪನೆ ಸೃಷ್ಟಿಸಿದ್ದರು. ಗ್ರಾಮ ಸ್ವರಾಜ್ಯದ ಕನಸು ಕಂಡಿದ್ದರು. ಗ್ರಾಮಗಳ ಒಕ್ಕೂಟವೇ ರಾಷ್ಟ್ರವಾಗಬೇಕು ಎನ್ನುತ್ತಿದ್ದರು’ ಎಂದು ನಾಗಭೂಷಣ ಅವರು ‘ಹಿಂದ್ ಸ್ವರಾಜ್’ ಪುಸ್ತಕದ ಸಾರಾಂಶವನ್ನು ತೆರೆದಿಟ್ಟರು.

**ಯುವಕರಿಗೆ ಬದುಕುವುದೇ ಗೊತ್ತಿಲ್ಲ:** 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಪಾಲ್ಗೊಂಡಿದ್ದ ನೆನಪುಗಳನ್ನು ಹಂಚಿಕೊಂಡ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ.ಶ್ರೀನಿವಾಸಯ್ಯ, ‘ಆಗ ಕಾಲೇಜು ವಿದ್ಯಾರ್ಥಿಗಳೇ ನಾಯಕರು. ಅವರೆಲ್ಲಾ ಹೋರಾಟಕ್ಕೆ ಧುಮುಕಿ ಜೈಲು ಸೇರಿದ್ದರು. ಆದರೆ, ಈಗಿನ ಯುವಕರಿಗೆ ಹೇಗೆ ಬದುಕಬೇಕು ಎಂಬುದೇ ಗೊತ್ತಿಲ್ಲ. ಓದು ಎಂದರೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ, ಟಿ.ವಿ ನೋಡಬೇಡ ಎಂದರೆ ಮನೆಬಿಟ್ಟು ಓಡಿ ಹೋಗುತ್ತಾರೆ’ ಎಂದು ಟೀಕಿಸಿದರು. ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್ ಮಾತನಾಡಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಅವರು ವಿನೋಬಾ ಭಾವೆ ವಿರಚಿತ ‘ಮೃತ್ಯು’ ಕೃತಿ ಹಾಗೂ ವೇಮಗಲ್ ಸೋಮಶೇಖರ್ ಬರೆದಿರುವ ‘ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ’ ಕೃತಿಯನ್ನು ಲೋಕಾರ್ಪಣೆ ಮಾಡಿದರು.



ನಗರದ ಗಾಂಧಿ ಭವನದಲ್ಲಿ ಶನಿವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ‘ಕ್ವಿಟ್ ಇಂಡಿಯಾ’ ಚಳವಳಿಯ ನೆನಪು ಮತ್ತು ‘ಹಿಂದ್ ಸ್ವರಾಜ್’ ಪುನರಾವಲೋಕನ ಸಮಾರಂಭದಲ್ಲಿ ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್ ಅವರು ಲೇಖಕ ವೇಮಗಲ್ ಸೋಮಶೇಖರ್ ಅವರನ್ನು ಸನ್ಮಾನಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ.ಶ್ರೀನಿವಾಸಯ್ಯ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್ ಚಿತ್ರದಲ್ಲಿದ್ದಾರೆ

ಸಂಯುಕ್ತ ಕರ್ನಾಟಕ

ಆಗಸ್ಟ್ | 10 | 2014 | ಬೆಂಗಳೂರು

# ಸ್ವಾತಂತ್ರ್ಯ ಹೋರಾಟದ ಕಸುವು ಈಗಿಲ್ಲ

ಬೆಂಗಳೂರು, ಆ. 9: ಸ್ವಾತಂತ್ರ್ಯ ಪೂರ್ವದಲ್ಲಿದ್ದ ಹೋರಾಟಕ್ಕೂ ಪ್ರಸ್ತುತ ಹೋರಾಟಕ್ಕೂ ಬಹಳಷ್ಟು ವ್ಯತ್ಯಾಸವಿದೆ ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಎಚ್.ಕೆ. ಪಾಟೀಲ್ ವಿಷಾದಿಸಿದ್ದಾರೆ.



ನಗರದ ಗಾಂಧಿಭವನದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ, ಡಾ. ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ 'ಕ್ವಿಟ್ ಇಂಡಿಯಾ' ಚಳವಳಿ ಒಂದು ನೆನಪು ಮತ್ತು 'ಹಿಂದ್ ಸ್ವರಾಜ್' ಪುನರಾವಲೋಕನ ಮತ್ತು ನರಸಿಂಹ ದಾಬಡೆ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ಇವತ್ತಿನ ಹೋರಾಟಗಳು ಲಾಭ, ಅಪೇಕ್ಷೆಗಳಿಂದ ಹಾಗೂ ವೈಯಕ್ತಿಕ ಹಿತಾಸಕ್ತಿಗಳಿಂದ ಕೂಡಿದ್ದ ಹೋರಾಟಗಳಾಗಿದ್ದು, ಜೈಲಿಗೆ ಹೋದವರು ಐಷಾರಾಮಿ ಸವಲತ್ತುಗಳನ್ನು ಅನುಭವಿಸಿ ಬಂದು ನಾಟಕೀಯ ಹೋರಾಟ ಮಾಡುತ್ತಿದ್ದಾರೆ. ಆದರೆ, ಬ್ರಿಟಿಷರ ಕಾಲದ ಹೋರಾಟದಲ್ಲಿ ಯಾವುದೇ ಪ್ರತಿಫಲ, ಅಪೇಕ್ಷೆಗಳಿಲ್ಲದೆ, ನಿಸ್ವಾರ್ಥವಾಗಿ ದೇಶಕ್ಕಾಗಿ ಹೋರಾಟ ಮಾಡುತ್ತಿದ್ದರು ಎಂದು ತಿಳಿಸಿದರು.

## ಅಸ್ತ್ರ

ದೇಶ ಸ್ವಾತಂತ್ರ್ಯ ಹೊಂದಿದ್ದ ಸಂದರ್ಭದಲ್ಲಿ ನಮ್ಮ ರಾಷ್ಟ್ರದಲ್ಲಿ ಒಂದು ಸೂಜಿ ತಯಾರಿಸುವ ಕಾರ್ಖಾನೆಗಳಿರಲಿಲ್ಲ, ಆದರೆ, ಇಂದು ನಮ್ಮ ರಾಷ್ಟ್ರ ವಿಜ್ಞಾನ, ಕೈಗಾರಿಕೆ, ಮಾನವಸಂಪನ್ಮೂಲ ಸೇರಿದಂತೆ ಎಲ್ಲಾ ಕ್ಷೇತ್ರಗಳಲ್ಲಿಯೂ ಅಭಿವೃದ್ಧಿ ಸಾಧಿಸಿ ಇಂದು ಮಂಗಳಗ್ರಹಕ್ಕೆ ಉಪಗ್ರಹ ಕಳುಹಿಸುವ ಮಟ್ಟಕ್ಕೆ ನಮ್ಮ ರಾಷ್ಟ್ರ ಪ್ರಗತಿಯನ್ನು ಸಾಧಿಸಿದೆ. ಆದರೆ, ನಮ್ಮ ದೇಶ ಬೌದ್ಧಿಕವಾಗಿ ಎಷ್ಟೇ ಮುಂದುವರೆದಿದ್ದರೂ, ಗಾಂಧಿವಾದಿಗಳಲ್ಲಿ ಸಮಾಧಾನವಿಲ್ಲ. ಏಕೆಂದರೆ ನಮ್ಮ ದೇಶ ಬೌದ್ಧಿಕವಾಗಿ ಅಭಿವೃದ್ಧಿ ಹೊಂದುತ್ತಿದೆ. ಆದರೆ ನೈತಿಕವಾಗಿ ಅಧಃಪತನಕ್ಕೆ ಹೋಗುತ್ತಿದೆ. ರಾಜಕಾರಣಿಗಳು, ಸಂಘ ಸಂಸ್ಥೆಗಳು, ಜನರು ನೈತಿಕ ಮೌಲ್ಯಗಳನ್ನು ಕಳೆದುಕೊಂಡು ದೇಶ ಅಧಃಪತನಕ್ಕೆ ಹೋಗುತ್ತಿದೆ ಎಂಬುದು ಅವರ ವಾದವಾಗಿದೆ. ಆದ ಕಾರಣ ಪ್ರತಿಯೊಬ್ಬರು ಗಾಂಧೀಜಿಯವರ ಫೋಟೋವನ್ನು ಅಸ್ತ್ರವಾಗಿ ಮಾಡಿಕೊಂಡು ನೈತಿಕ ಮೌಲ್ಯಗಳನ್ನು ಪುನರ್‌ಪ್ರತಿಷ್ಠಾಪಿಸಬೇಕಿದೆ ಎಂದು ಕರೆ ನೀಡಿದರು.

ವಿನೋಬ ವಿರಚಿತ ಮೃತ್ಯು ಹಾಗೂ ವೇಮಗಲ್ ಸೋಮಶೇಖರ ಅವರ ನಂದಿ ಗಿರಿಧಾಮದಲ್ಲಿ ಮಹಾತ್ಮಗಾಂಧಿ ಕೃತಿಗಳನ್ನು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಬಿಡುಗಡೆಗೊಳಿಸಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್. ವಿಶುಕುಮಾರ್ ಮತ್ತು ಸಮಾಜವಾದಿ ಚಿಂತಕ ಡಿ.ಎಸ್. ನಾಗಭೂಷಣ್ ಉಪಸ್ಥಿತರಿದ್ದರು.

## ಬಯಲು ಶೌಚಾಲಯ ಮುಕ್ತ ರಾಜ್ಯ

ಗ್ರಾಮಗಳಿಗೂ ಗಾಂಧೀಜಿಯವರಿಗೂ ಅವಿನಾಭಾವ ಸಂಬಂಧವಿದ್ದು, ಈ ಹಿನ್ನೆಲೆ ಗಾಂಧೀಜಿಯವರ ಬಯಲು ಮುಕ್ತ ಶೌಚಾಲಯದ ರಾಷ್ಟ್ರವನ್ನಾಗಿ ಮಾಡಬೇಕೆಂದು ಆಶಯ ಇತ್ತು. ಈ ಹಿನ್ನೆಲೆಯಲ್ಲಿ ಅವರ 150ನೇ ಜನ್ಮದಿನಾಚರಣೆಯ ಹೊತ್ತಿಗೆ ಕರ್ನಾಟಕವನ್ನು ಬಯಲು ಶೌಚಾಲಯ ಮುಕ್ತ ಮಾಡಲು ರಾಜ್ಯ ಸರ್ಕಾರ ಪಣತೊಟ್ಟಿದೆ. ಬಯಲು ಶೌಚಾಲಯ ಮುಕ್ತ ರಾಜ್ಯವನ್ನಾಗಿ ಮಾಡಲು ಕೇವಲ ಸರ್ಕಾರ ಒಂದರಿಂದಲೇ ಸಾಧ್ಯವಿಲ್ಲ. ಸರ್ಕಾರದ ಜೊತೆ ಜನರು, ಯುವಕರು ಕೈಜೋಡಿಸಿದರೆ ಮಾತ್ರ ಆ ಕನಸು ನನಸಾಗಲು ಸಾಧ್ಯ.

– ಎಚ್.ಕೆ.ಪಾಟೀಲ್, ಸಚಿವ

ಇವತ್ತಿನ ಹೋರಾಟಗಳು ಲಾಭ, ಅಪೇಕ್ಷೆಗಳಿಂದ ಹಾಗೂ ವೈಯಕ್ತಿಕ ಹಿತಾಸಕ್ತಿಗಳಿಂದ ಕೂಡಿದ್ದ ಹೋರಾಟಗಳಾಗಿದ್ದು, ಜೈಲಿಗೆ ಹೋದವರು ಐಷಾರಾಮಿ ಸವಲತ್ತುಗಳನ್ನು ಅನುಭವಿಸಿ ಬಂದು ನಾಟಕೀಯ ಹೋರಾಟ ಮಾಡುತ್ತಿದ್ದಾರೆ. ಆದರೆ, ಬ್ರಿಟಿಷರ ಕಾಲದ ಹೋರಾಟದಲ್ಲಿ ಯಾವುದೇ ಪ್ರತಿಫಲ ಅಪೇಕ್ಷೆಗಳಿಲ್ಲದೆ, ನಿಸ್ವಾರ್ಥವಾಗಿ ದೇಶಕ್ಕಾಗಿ ಹೋರಾಟ ಮಾಡುತ್ತಿದ್ದರು.



### ಗ್ರಾಮೀಣಾಭಿವೃದ್ಧಿ ಸಚಿವ ಎಚ್ ಕೆ ಪಾಟೀಲ್ ಹೇಳಿಕೆ

# ಬಯಲು ಶೌಚಮುಕ್ತ ರಾಜ್ಯದ ಗುರಿ

**ವಿಕ ಸುದ್ದಿಲೋಕ** ಬೆಂಗಳೂರು

ಸರಕಾರ ಐದು ವರ್ಷಗಳಲ್ಲಿ ಕರ್ನಾಟಕವನ್ನು ಬಯಲು ಶೌಚ ಮುಕ್ತ ರಾಜ್ಯವಾಗಿಸುವ ಗುರಿ ಹೊಂದಿದೆ ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಚ್. ಕೆ.ಪಾಟೀಲ್ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ, ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಗಾಂಧಿ ಭವನದಲ್ಲಿ ಶನಿವಾರ ಏರ್ಪಡಿಸಿದ್ದ 'ಕ್ವಿಟ್ ಇಂಡಿಯಾ ಚಳವಳಿ ಒಂದು ನೆನಪು' , ಹಿಂದ್ ಸ್ವರಾಜ್ ಪುನರಾವಲೋಕನ ಹಾಗೂ ನರಸಿಂಹ ದಾಬಡೆ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

"ಗಾಂಧೀಜಿ ಅವರ 150ನೇ ಜನ್ಮದಿನಾಚರಣೆಯನ್ನು 2019ಕ್ಕೆ ಅದ್ದೂರಿ ಹಾಗೂ ವಿಶೇಷವಾಗಿ ಆಚರಿಸಲಾಗುವುದು. ಈ ವೇಳೆಗೆ ಶೌಚಾಲಯ ಮುಕ್ತ ರಾಜ್ಯವಾಗಿಸಲು ಸರಕಾರ ಪಣ ತೊಟ್ಟಿದೆ," ಎಂದು ಹೇಳಿದರು.

"ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಶೌಚಾಲಯಕ್ಕೆ ಬಯಲಿಗೆ ಹೋಗುತ್ತಿದ್ದಾರೆ. ಇದು ನಿಜಕ್ಕೂ ನಾಚಿಕೆಗೇಡಿನ ಸಂಗತಿ. ಗ್ರಾಮೀಣ ಪ್ರದೇಶಗಳಲ್ಲಿ ನಾನಾ ವಸತಿ ಯೋಜನೆಯಡಿ ಮನೆ ಕಟ್ಟಿಸಿಕೊಡುತ್ತಿದ್ದೇವೆ. ಈ ವೇಳೆ ಕಡ್ಡಾಯವಾಗಿ ಶೌಚಾಲಯ ನಿರ್ಮಿಸಿಕೊಳ್ಳಬೇಕೆಂದು ಆದೇಶಿಸಿದ್ದೇವೆ. ಶೌಚಾಲಯ ನಿರ್ಮಿಸಿಕೊಳ್ಳಲು ಸಬ್ಸಿಡಿಯನ್ನೂ ನೀಡುತ್ತಿದ್ದೇವೆ. ಆದರೂ ಗ್ರಾಮೀಣ ಪ್ರದೇಶದ ಜನರು ಮೌಢ್ಯದಿಂದಲೋ ಅಥವಾ ಇನ್ನೇನೋ ಕಾರಣದಿಂದ ಮನೆಯಲ್ಲೇ ಶೌಚಾಲಯ ನಿರ್ಮಿಸಿಕೊಳ್ಳಲು ಹಿಂದೇಟು ಹಾಕುತ್ತಾರೆ," ಎಂದು ವಿಷಾದಿಸಿದರು.



ಗಾಂಧಿ ಭವನದಲ್ಲಿ ನಡೆದ 'ಕ್ವಿಟ್ ಇಂಡಿಯಾ ಚಳವಳಿ: ಒಂದು ನೆನಪು' ಕಾರ್ಯಕ್ರಮದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಹೊ ಶ್ರೀನಿವಾಸಯ್ಯ, ಸಚಿವ ಎಚ್ ಕೆ ಪಾಟೀಲ್, ವಾರ್ತಾ ಇಲಾಖೆ ನಿರ್ದೇಶಕ ಎನ್ ಆರ್ ವಿಶುಕುಮಾರ್ ಮತ್ತಿತರರು ಉಪಸ್ಥಿತರಿದ್ದರು.

**ಈಗಿನ ಹೋರಾಟದ ಸ್ವರೂಪವೇ ಬದಲು:** "ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧದ ಹೋರಾಟಗಳಲ್ಲಿ ಜವಾಬ್ದಾರಿ, ಪ್ರಾಮಾಣಿಕತೆ ಮತ್ತು ಮೌಲ್ಯ ಇರುತ್ತಿತ್ತು. ಹಲವರು ನಿಸ್ವಾರ್ಥವಾಗಿ ಹೋರಾಟದಲ್ಲಿ ಪಾಲ್ಗೊಳ್ಳುತ್ತಿದ್ದರು. ಹೀಗಾಗಿ ಇವುಗಳ ಪರಿಣಾಮ, ಪ್ರಭಾವ ಬೇಗ ಉಂಟಾಗುತ್ತಿತ್ತು. ಆದರೆ, ಇತ್ತೀಚೆಗೆ ಹೋರಾಟಗಳಿಗೆ ದಿಕ್ಕುದೆಸೆ ಇಲ್ಲದಂತಾಗಿದೆ," ಎಂದು ಬೇಸರ ವ್ಯಕ್ತಪಡಿಸಿದರು.

"ಸ್ವಾತಂತ್ರ್ಯ ಸಿಕ್ಕಾಗ ಒಂದು ಸೂಜಿ ತಯಾರಿಸುವ ಕಾರ್ಖಾನೆ ಇರಲಿಲ್ಲ. ಇಂದು ವಿಜ್ಞಾನ-ತಂತ್ರಜ್ಞಾನದಲ್ಲಿ ನಾವು ಮುಂಚೂಣಿಯಲ್ಲಿದ್ದೇವೆ. ಬೌದ್ಧಿಕವಾಗಿ ಸಾಕಷ್ಟು ಅಭಿವೃದ್ಧಿ ಹೊಂದಿದ್ದೇವೆ. ಆದರೆ ನೈತಿಕವಾಗಿ ಅಧಃಪತನಕ್ಕೆ ಇಳಿದಿದ್ದೇವೆ" ಎಂದು ಹೇಳಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ವೂಡೇ ಪಿ.ಕೃಷ್ಣ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್, ಸಮಾಜವಾದಿ ಚಿಂತಕ ಬಿ.ಎಸ್. ನಾಗಭೂಷಣ ಮುಂತಾದವರು ಪಾಲ್ಗೊಂಡಿದ್ದರು.

## ಗಾಂಧೀಜಿ 150ನೇ ಜನ್ಮೋತ್ಸವದಂದು ಘೋಷಣೆ | ಅಹಿಂಸೆ, ಚರಕವೇ ಗಾಂಧೀಜಿಯವರ ಪ್ರಮುಖ ಅಸ್ತ್ರ

# 2019ಕ್ಕೆ ಬಯಲು ಶೌಚ ಮುಕ್ತ ರಾಜ್ಯ ನಿರ್ಮಾಣ

**ದಿಗಂತ ವರದಿ: ಬೆಂಗಳೂರು, ಆ.9**

ಮುಂಬರುವ 2019 ರ ವೇಳೆಗೆ ಕರ್ನಾಟಕವನ್ನು ಬಯಲು ಶೌಚಮುಕ್ತ ಮಾಡಲಾಗುವುದು ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ. ಪಾಟೀಲ್ ಭರವಸೆ ನೀಡಿದರು.

ನಗರದ ಗಾಂಧಿಭವನದಲ್ಲಿ ಶನಿವಾರ ಏರ್ಪಡಿಸಿದ್ದ ಕ್ವಿಟ್ ಇಂಡಿಯಾ ಚಳವಳಿ -ಒಂದು ನೆನಪು ಮತ್ತು ಹಿಂದ್ ಸ್ವರಾಜ್ -ಪುನರಾವಲೋಕನ ಹಾಗೂ ನರಸಿಂಹ ದಾಬಡೆ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಚರಕದಲ್ಲಿ ನೂಲು ತೆಗೆಯುವ ಮೂಲಕ ಉದ್ಘಾಟಿಸಿ ಅವರು ಮಾತನಾಡಿದರು.

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಅವರಿಗೂ ಗ್ರಾಮಗಳಿಗೂ ಅವಿನಾಭಾವ ಸಂಬಂಧವಿದೆ. ಗ್ರಾಮಗಳಿಗೆ ಸಭಾ ಭವನ ನಿರ್ಮಿಸಿ, ರಸ್ತೆಗಳಿಗೆ ಕಾಂಕ್ರಿಟ್ ಹಾಕಿಸಿ, ದೇವಸ್ಥಾನಗಳಿಗೆ ಗೋಪುರ ಕಟ್ಟಿ ಎಂದು ಅವರು ಹೇಳಲಿಲ್ಲ. ಬಯಲು ಶೌಚ ಮುಕ್ತ ಹಳ್ಳಿಗಳನ್ನು ನಿರ್ಮಿಸಿ ಎಂದು ಸಂದೇಶ ನೀಡಿದ್ದರು ಎಂದು ಸ್ಮರಿಸಿದರಲ್ಲದೆ, ಗಾಂಧೀಜಿ ಅವರು ಬಯಲು ಶೌಚಮುಕ್ತ ವಾತಾವರಣ ಕಲ್ಪಿಸಿ ಎಂದು ಕರೆ ನೀಡಿದ್ದರು. ಸರ್ಕಾರ 2019ಕ್ಕೆ ಕರ್ನಾಟಕವನ್ನು ಬಯಲು ಶೌಚಮುಕ್ತ ರಾಜ್ಯವನ್ನಾಗಿ ಮಾಡಿ ಅವರ ಆಶಯವನ್ನು ನೆರವೇರಿಸಲಿದೆ ಎಂದರು. ಗಾಂಧೀಜಿ ಅವರ 150ನೇ ಜನ್ಮದಿನಾಚರಣೆ ಪ್ರಯುಕ್ತ 2019ಕ್ಕೆ ಬಯಲು ಶೌಚ ಮುಕ್ತರಾಜ್ಯವನ್ನಾಗಿ ಮಾಡಲು ಸರ್ಕಾರ ಪಣ ತೊಟ್ಟಿದೆ. ಇದಕ್ಕೆ ಜನತೆ ಕೈಜೋಡಿಸಬೇಕು ಎಂದು ಮನವಿ ಮಾಡಿದರು. ಗಾಂಧೀಜಿ ಅವರು ಅಹಿಂಸೆ, ಚರಕವನ್ನೇ ತಮ್ಮ ಪ್ರಮುಖ ಅಸ್ತ್ರ ಮಾಡಿಕೊಂಡಿದ್ದರು. ಅವರ ಸಂದೇಶಗಳನ್ನು ನೆನಪಿಸಿಕೊಳ್ಳುವುದು ಇಂದಿನ ಅಗತ್ಯವಾಗಿದೆ. ಸಮಾನತೆ ಬರಬೇಕೆಂಬುದು ಅವರ ಕನಸಾಗಿತ್ತು. ಅಸಮಾನತೆಯಿಂದ ಗಾಂಧೀಜಿಯವರ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ ಎಂದು ಅಭಿಪ್ರಾಯಪಟ್ಟರು.



ಗಾಂಧಿ ಭವನದಲ್ಲಿ ಶನಿವಾರ ಏರ್ಪಡಿಸಿದ್ದ ಕ್ವಿಟ್ ಇಂಡಿಯಾ ಚಳವಳಿ -ಒಂದು ನೆನಪು ಸಮಾರಂಭವನ್ನು ಚರಕದಲ್ಲಿ ನೂಲು ತೆಗೆಯುವ ಮೂಲಕ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಎಚ್.ಕೆ.ಪಾಟೀಲ್ ಉದ್ಘಾಟಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್, ಸಮಾಜವಾದಿ ಚಿಂತಕ ನಾಗಭೂಷಣ ಹಾಜರಿದ್ದರು.

### ಭೌತಿಕವಾಗಿ ಮುಂದುವರೆದು ನೈತಿಕವಾಗಿ ಹಿಂದುಳಿದೆವು

ಗ್ರಾಮೀಣರ ಬದುಕು ಹಸನಾಗಬೇಕು. ಬಡತನ, ಅಜ್ಞಾನ, ಅವೈಜ್ಞಾನಿಕತೆ ತೊಲಗಬೇಕು. ಉಳ್ಳವರು-ಬಡವರ ನಡುವೆ ನಿರ್ಮಾಣವಾಗಿರುವ ಅಂತರ ಹೋಗಬೇಕು. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಗುಂಡುಸೂಜಿ ತಯಾರಿಸುವ ಕಾರ್ಖಾನೆಯೂ ನಮ್ಮಲ್ಲಿರಲಿಲ್ಲ. ಇಂದು ವಿಜ್ಞಾನದಲ್ಲಿ ನಾವು ಉನ್ನತ ಸಾಧನೆ ಮಾಡಿದ್ದೇವೆ, ಚಂದ್ರಯಾನವನ್ನೂ ಕೈಗೊಂಡಿದ್ದೇವೆ. ನಮ್ಮಲ್ಲಿ ಹೆಚ್ಚು ಮಾನವ ಸಂಪನ್ಮೂಲವಿದೆ. ಆದರೆ, ಮೌಲ್ಯಗಳ ಅಧಃಪತನವಾಗಿದೆ. ಭೌತಿಕವಾಗಿ ನಾವು ಮುಂದುವರೆದಿದ್ದರೂ ನೈತಿಕವಾಗಿ ಹಿಂದುಳಿದಿದ್ದೇವೆ. ಇದು ಗಾಂಧೀಜಿ ಅನುಯಾಯಿಗಳಿಗೆ ಬೇಸರ ಉಂಟುಮಾಡುತ್ತಿದೆ ಎಂದು ಹೇಳಿದರು.

ಅಶುದ್ಧ ನೀರು ಕುಡಿದು ಪ್ರತಿ ಗಂಟೆಗೆ 180 ಮಕ್ಕಳು ದೇಶದಲ್ಲಿ ಸಾಯುತ್ತಿದ್ದಾರೆ. ಬಾಟಲ್‌ಗಳ ಶುದ್ಧ ಕುಡಿಯುವ ನೀರು ಕುಡಿಯುವ ವರ್ಗ ಮತ್ತು ಕೆರೆ, ಕಟ್ಟೆಗಳ ನೀರನ್ನು ಕುಡಿಯುವ ಶ್ರಮ ಜೀವಿಗಳ ಇನ್ನೊಂದು ವರ್ಗ ನಿರ್ಮಾಣವಾಗಿದೆ ಎಂದು ಅವರು ವಿಷಾದಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ವಾರ್ತಾ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್, ಸಮಾಜವಾದಿ ಚಿಂತಕ ಡಿ.ಎಸ್.ನಾಗಭೂಷಣ ಉಪಸ್ಥಿತರಿದ್ದರು.

### ದಿಕ್ಕು ತಪ್ಪುತ್ತಿರುವ ಹೋರಾಟಗಳು

ಹಿಂದೆ ಹೋರಾಟಗಳಿಗೆ ಸ್ಪಷ್ಟ ಗುರಿಯಿತ್ತು. ಆದರೀಗ ವೈಯಕ್ತಿಕ ಅಪೇಕ್ಷೆ, ಗುರಿ ಇರುತ್ತದೆ. ಹೆಚ್ಚು ಅಂದರೆ ಒಂದೆರಡು ದಿವಸ ಜೈಲು ಶಿಕ್ಷೆಯಾಗುತ್ತದೆ. ಇಂದಿನ ಹೋರಾಟಗಳು ದಿಕ್ಕುತಪ್ಪುತ್ತಿವೆ ಎಂದು ಸಚಿವ ಎಚ್.ಕೆ. ಪಾಟೀಲ್ ವಿಷಾದಿಸಿದರು. ಬ್ರಿಟೀಷರ ಕಾಲದಲ್ಲಿ ಜೈಲಿಗೆ ಹೋಗುತ್ತಿದ್ದ ಸ್ವಾತಂತ್ರ್ಯ ಹೋರಾಟಗಾರರು ತಾವು ವಾಪಸ್ ಬರುತ್ತೇವೆ ಎಂಬ ವಿಶ್ವಾಸವನ್ನು ಹೊಂದಿರಲಿಲ್ಲ. ಅವರ ಕುಟುಂಬದವರಿಗೂ ಜೈಲಿಗೆ ಹೋದವರು ವಾಪಸ್ ಬರುವ ವಿಶ್ವಾಸವಿರಲಿಲ್ಲ, ಅಂತಹ ಪರಿಸ್ಥಿತಿಯಲ್ಲೂ ಲಕ್ಷಾಂತರ ದೇಶಪ್ರೇಮಿಗಳು ಹೋರಾಟ ನಡೆಸಿದರು ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

# 2019ಕ್ಕೆ ಬಯಲು ಶೌಚ ಮುಕ್ತ ರಾಜ್ಯ

ಬೆಂಗಳೂರು, ಆ.9- ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ 150ನೆ ಜನ್ಮದಿನಾಚರಣೆ ಪ್ರಯುಕ್ತ 2019ಕ್ಕೆ ಕರ್ನಾಟಕವನ್ನು ಬಯಲು ಬಹಿರ್ದೆಸೆಮುಕ್ತ ರಾಜ್ಯ ಮಾಡಲು ಸರ್ಕಾರ ಪಣ ತೊಟ್ಟಿದೆ ಎಂದು ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್ ಇಂದಿಲ್ಲಿ ಘೋಷಿಸಿದರು.

ಗಾಂಧಿ ಭವನದಲ್ಲಿಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಶಾಂತಿ ಪ್ರತಿಷ್ಠಾನ ಬೆಂಗಳೂರು, ಡಾ.ಲೋಹಿಯಾ ಜನ್ಮ ಶತಾಬ್ದಿ ಪ್ರತಿಷ್ಠಾನ ಶಿವಮೊಗ್ಗ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಆಶ್ರಯದಲ್ಲಿ ಹಮ್ಮಿಕೊಳ್ಳಲಾಗಿದ್ದ ಕ್ವಿಟ್ ಇಂಡಿಯಾ ಚಳವಳಿ ಒಂದು ನೆನಪು, ಹಿಂದ್ ಸ್ವರಾಜ್ ಪುನರಾವಲೋಕನ ಹಾಗೂ ಸಚಿತ್ರ ವಾಚಕ ಪ್ರಶಸ್ತಿ ಪ್ರದಾನ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ಮಹಾತ್ಮ ಗಾಂಧೀಜಿ ಸದಾ ಗ್ರಾಮೀಣ ಪ್ರದೇಶಗಳ ಬಗ್ಗೆ ಚಿಂತನೆ ಮಾಡುತ್ತಿದ್ದರು. ಹೆಣ್ಣು ಮಕ್ಕಳಿಗೆ ಉತ್ತಮ ಶಿಕ್ಷಣ ಸಿಗಬೇಕು, ಮಹಿಳೆಯರಿಗೆ ಶೌಚಾಲಯ ಕೊಡಿಸಬೇಕೆಂಬ ಮಹದಾಸೆ ಹೊಂದಿದ್ದರು. 2019ಕ್ಕೆ ಗಾಂಧೀಜಿಯವರ ಜನ್ಮ ದಿನಾಚರಣೆಯನ್ನು ಅದ್ಧೂರಿ ಹಾಗೂ ವಿಶೇಷವಾಗಿ ಹಮ್ಮಿಕೊಳ್ಳಲಾಗುತ್ತಿದ್ದು, ಈ ವೇಳೆಗೆ ನಮ್ಮ ರಾಜ್ಯವನ್ನು ಬಯಲು ಬಹಿರ್ದೆಸೆ ಮುಕ್ತ ಮಾಡುತ್ತೇವೆ ಎಂದು ಹೇಳಿದರು.

ಇಂದಿಗೂ ಕೂಡ ಗ್ರಾಮೀಣ ಪ್ರದೇಶಗಳಲ್ಲಿ ಸೂರ್ಯೋದಯಕ್ಕೆ ಮೊದಲು ಹಾಗೂ ಸೂರ್ಯಾಸ್ತದ ನಂತರ ಮಹಿಳೆಯರು ಬಹಿರ್ದೆಸೆಗೆ ಹೋಗುತ್ತಾರೆ. ಇದು ನಿಜಕ್ಕೂ ನಾಚಿಕೆಗೇಡಿನ ವಿಷಯ. ಶೌಚಾಲಯ ಕಟ್ಟಿಕೊಡಲಾಗದಿರುವುದು ದೋಚನೀಯ ಎಂದರು.

ಗ್ರಾಮೀಣ ಪ್ರದೇಶಗಳಲ್ಲಿ ವಿವಿಧ ವಸತಿ ಯೋಜನೆಯಡಿ ಮನೆ ಕಟ್ಟಿಸಿಕೊಡುತ್ತಿದ್ದೇವೆ. ಈ ಸಂದರ್ಭದಲ್ಲಿ ಕಡ್ಡಾಯವಾಗಿ




ಶೌಚಾಲಯ ನಿರ್ಮಿಸಿಕೊಳ್ಳಬೇಕೆಂದು ಆದೇಶ ನೀಡಿದ್ದೇವೆ. ಶೌಚಾಲಯ ನಿರ್ಮಿಸಿಕೊಳ್ಳಲು ಸಬ್ಸಿಡಿಯನ್ನೂ ನೀಡುತ್ತಿದ್ದೇವೆ, ಆದರೂ ಗ್ರಾಮೀಣ ಪ್ರದೇಶದ ಜನರು ಮೌಢ್ಯದಿಂದಲೋ ಅಥವಾ ಇನ್ನೇನೋ ಕಾರಣದಿಂದ ಮನೆಯಲ್ಲೇ ಶೌಚಾಲಯ ನಿರ್ಮಿಸಿಕೊಳ್ಳಲು ಹಿಂದೇಟು ಹಾಕುತ್ತಾರೆ. ಶೌಚಾಲಯ ನಿರ್ಮಿಸಿಕೊಳ್ಳಲು ಮುಂದೆ ಬರುವುದೇ ಇಲ್ಲ ಎಂದು ವಿಷಾದಿಸಿದರು.

ಇಂದಿನ ಹೋರಾಟಗಳಿಗೆ ದಿಕ್ಕುದೆಸೆ ಇಲ್ಲ: ಹಿಂದೆ ಬ್ರಿಟಿಷರ ವಿರುದ್ಧ ಹಮ್ಮಿಕೊಳ್ಳುತ್ತಿದ್ದ ಹೋರಾಟಗಳಲ್ಲಿ ಜವಾಬ್ದಾರಿ, ಮೌಲ್ಯ ಇರುತ್ತಿತ್ತು. ಅನೇಕ ಮಹನೀಯರು ನಿಸ್ವಾರ್ಥವಾಗಿ ಹೋರಾಟದಲ್ಲಿ ಪಾಲ್ಗೊಳ್ಳುತ್ತಿದ್ದರು. ಹಾಗಾಗಿ ಇವುಗಳ ಪರಿಣಾಮ, ಪ್ರಭಾವ ಬೇಗ ಉಂಟಾಗುತ್ತಿತ್ತು.

ಆದರೆ, ಇತ್ತೀಚೆಗೆ ಹೋರಾಟಗಳಿಗೆ ದಿಕ್ಕುದೆಸೆ ಇಲ್ಲದ ಸ್ಥಿತಿ ಇದೆ ಎಂದು ಎಚ್.ಕೆ.ಪಾಟೀಲ್ ಇದೇ ವೇಳೆ ಬೇಸರ ವ್ಯಕ್ತಪಡಿಸಿದರು.

ಕೇವಲ ಸ್ವಾರ್ಥ ಹಾಗೂ ಅಗ್ಗದ ಪ್ರಚಾರಕ್ಕೆ ಇಂದಿನ ಹೋರಾಟಗಳು ಸೀಮಿತವಾಗಿವೆ. ಭ್ರಷ್ಟರೆನಿಸಿಕೊಂಡವರೇ ಹೋರಾಟಕ್ಕಿಳಿಯುತ್ತಾರೆ. ಗಾಂಧೀಜಿ ಫೋಟೊ ಇಟ್ಟುಕೊಂಡು ಸತ್ಯಾಗ್ರಹ ಮಾಡುವುದು ಫ್ಯಾಷನ್ ಆಗಿಬಿಟ್ಟಿದೆ. ಹಾಗಾಗಿಯೇ ಇಂದಿನ ಹೋರಾಟಗಳ ಬಗ್ಗೆ ಜನ ತಲೆ ಕೆಡಿಸಿಕೊಳ್ಳುವುದೇ ಇಲ್ಲ ಎಂದು ಹೇಳಿದರು.

ಇಂದಿನ ಹೋರಾಟಗಾರರಿಗೆ ನೈತಿಕತೆಯೇ ಇಲ್ಲ, ಇದೆಲ್ಲ ಸ್ಥಿತಿ ನಮ್ಮಲ್ಲಷ್ಟೆ ಅಲ್ಲ, ಇಡೀ ದೇಶದಲ್ಲೇ ಈ ರೀತಿಯಾಗಿಬಿಟ್ಟಿದೆ ಎಂದು ವಿಷಾದಿಸಿದರು.

ಶುದ್ಧ ಕುಡಿಯುವ ನೀರು: ನಮಗೆ ಸ್ವಾತಂತ್ರ್ಯ ಸಿಕ್ಕ ವೇಳೆ ನಾಡಿನಲ್ಲಿ ಒಂದು ಸೂಜಿ ತಯಾರಿಸುವ ಕಾರ್ಖಾನೆ ಇರಲಿಲ್ಲ, ಇಂದು ವಿಜ್ಞಾನ-ತಂತ್ರಜ್ಞಾನ ಎಲ್ಲದರಲ್ಲೂ ನಾವು ಮುಂಚೂಣಿಯಲ್ಲಿದ್ದೇವೆ. ಆದರೂ ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡಲಾಗಿಲ್ಲ. ಪ್ರತಿ 30 ಸೆಕೆಂಡ್‌ಗೆ ಒಂದು ಮಗು ಸಾವನ್ನಪ್ಪಿದರೆ, ಪ್ರತಿ ಅರ್ಧ ಗಂಟೆಗೆ 180 ಮಕ್ಕಳು ಸಾವನ್ನಪ್ಪುತ್ತಿದ್ದಾರೆ. ಇದಕ್ಕೆ ಅಶುದ್ಧ ನೀರು, ಫ್ಲೋರೈಡ್ ನೀರೇ ಕಾರಣವಾಗಿದೆ. ನಮ್ಮ ಸರ್ಕಾರ ಶುದ್ಧ ನೀರು ಕೊಡಲು ಬದ್ಧವಾಗಿದೆ ಎಂದು ಸಚಿವರು ತಿಳಿಸಿದರು.

ಗ್ರಾಮೀಣ ಪ್ರದೇಶಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪನೆ ಮಾಡಿದ್ದೇವೆ. ಜನರು ಶುದ್ಧ ನೀರು ಕುಡಿದು ಆರೋಗ್ಯ ಕಾಪಾಡಿಕೊಳ್ಳಬೇಕು ಎಂದರು.

ಬಾಟಲ್ ನೀರು ಕುಡಿಯುವವರು ಹೈ-ಫೈ ಜನ. ಇಂಥದ್ದಕ್ಕೆ ಒಲಿಯದೆ ಶುದ್ಧ ನೀರು ಕುಡಿಯಿರಿ ಎಂದು ಎಚ್.ಕೆ.ಪಾಟೀಲ್ ಸಲಹೆ ನೀಡಿದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ಹೊ.ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ವೂಡೆ ಪಿ.ಕೃಷ್ಣ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್, ಸಮಾಜವಾದಿ ಚಿಂತಕ ಬಿ.ಎಸ್.ನಾಗಭೂಷಣ ಸೇರಿದಂತೆ ಹಲವಾರು ಗಣ್ಯರು ಪಾಲ್ಗೊಂಡಿದ್ದರು.

ಸಂಜೆವಾಣಿ

ಶನಿವಾರ
9 ಆಗಸ್ಟ್ 2014



# ಬಯಲು ಬಹಿರ್ದೆಸೆ ಮುಕ್ತ ರಾಜ್ಯ ನಿರ್ಮಾಣ: ಪಾಟೀಲ್

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಆ. ೯- ಗ್ರಾಮೀಣ ಮಹಿಳೆಯರಿಗೆ ಗೌರವಯುತ ಜೀವನ ದೊರೆಯಬೇಕು ಎಂಬುದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಕನಸಾಗಿದ್ದು, ಗಾಂಧೀಜಿಯವರ 150ನೇ ಜನ್ಮದಿನಾಚರಣೆ ಸಂದರ್ಭದಲ್ಲಿ ಕರ್ನಾಟಕವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡಲು ರಾಜ್ಯ ಸರ್ಕಾರ ಪಣ ತೊಟ್ಟಿದೆ ಎಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವ ಹೆಚ್.ಕೆ. ಪಾಟೀಲ್ ತಿಳಿಸಿದ್ದಾರೆ.

ಗಾಂಧೀಜಿ ಗ್ರಾಮಸ್ವರಾಜ್ಯದ ಚಿಂತನೆ ಹೊಂದಿದ್ದರು. ಗಾಂಧೀಜಿಗೂ, ಗ್ರಾಮಕ್ಕೂ ಅವಿನಾಭಾವ ಸಂಬಂಧವಿದೆ. ಗ್ರಾಮೀಣ ಭಾರತ ಪ್ರಗತಿ ಹೊಂದಬೇಕು. ಅಲ್ಲಿನ ಮಹಿಳೆಯರು ಗೌರವಯುತ ಜೀವನ ನಡೆಸಬೇಕು ಎಂದು ಗಾಂಧೀಜಿಯವರು ಕನಸು ಕಂಡಿದ್ದರು.

ಆದ್ದರಿಂದ ನಮ್ಮ ಸರ್ಕಾರ ಗಾಂಧೀಜಿಯವರ 150ನೇ ಜಯಂತಿಯ ವರ್ಷವಾದ 2019ಕ್ಕೆ ಕರ್ನಾಟಕವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವನ್ನಾಗಿ ಮಾಡಲು ನಿರ್ಧರಿಸಿದೆ ಎಂದು ಹೇಳಿದರು.

ಗಾಂಧಿ ಸ್ಮಾರಕ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನ ನಗರದ ಗಾಂಧಿಭವನದಲ್ಲಿಂದು ಏರ್ಪಡಿಸಿದ ಕ್ವಿಟ್ ಇಂಡಿಯಾ ಚಳವಳಿ - ಒಂದು ನೆನಪು ಮತ್ತು ಹಿಂದೂ ಸ್ವರಾಜ್ ಪುನರಾವಲೋಕನ ಮತ್ತು ನರಸಿಂಹ ದಾಬಡೆ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಅವರು ಮಾತನಾಡಿದರು.

ಇಂದಿನ ಹೋರಾಟಗಳು ಸ್ವಾರ್ಥ, ವೈಯಕ್ತಿಕ ಲಾಭ, ಸ್ವಹಿತಾಸಕ್ತಿಗಳಿಗಾಗಿ ನಡೆಯುತ್ತಿದೆ. ಇದರ ಪ್ರಭಾವವು ಅಷ್ಟೇನೂ ಶಕ್ತವಾಗಿರುವುದಿಲ್ಲ. ಆದರೆ ಹಿಂದಿನ ಕಾಲದಲ್ಲಿ ನಡೆಯುತ್ತಿದ್ದ ಹೋರಾಟಗಳು ನಿಸ್ವಾರ್ಥ ಹಾಗೂ ಸಮಾಜದ ಹಿತಾಸಕ್ತಿಗೆ ಪೂರಕವಾಗಿರುತ್ತಿದ್ದವು. ಅದರ ಪರಿಣಾಮವೂ ಶಕ್ತಿಶಾಲಿಯಾಗಿರುತ್ತಿದ್ದವು ಎಂದು ಹೇಳಿದ ಅವರು, ಈಗಿನ ಹೋರಾಟಗಳು ಜೈಲಿನಲ್ಲಿ ಐಷಾರಾಮಿಯಾಗಿ ಇರುತ್ತಾರೆ. ಆದರೆ ಸ್ವಾತಂತ್ರ್ಯ ಹೋರಾಟಗಾರರು ಜೈಲಿಗೆ ಹೋದಾಗ ಅವರು ಮರಳಿ ಬರುತ್ತಾರೆಂಬುದೇ ಖಾತರಿ ಇರುತ್ತಿರಲಿಲ್ಲ ಎಂದು ಹೇಳಿದರು.

ದೇಶಕ್ಕೆ ಸ್ವಾತಂತ್ರ್ಯ ದೊರೆತಾಗ ಗುಂಡುಸೂಜಿ ತಯಾರಿಸುವ ಕಾರ್ಖಾನೆಗಳು ನಮ್ಮಲ್ಲಿ ಇರಲಿಲ್ಲ. ಆದರೆ ಇಂದು ದೇಶ ತಂತ್ರಜ್ಞಾನದಲ್ಲಿ ಪ್ರಗತಿ ಸಾಧಿಸಿ, ಚಂದ್ರಯಾನವನ್ನೂ ಮಾಡಲಾಗಿದೆ. ಆದರೆ ವಿಜ್ಞಾನ ಹಾಗೂ ತಂತ್ರಜ್ಞಾನ ಬೆಳೆದಂತೆ ನೈತಿಕ ಮೌಲ್ಯಗಳು ಕುಸಿಯುತ್ತಿದ್ದು, ಗಾಂಧೀಜಿಯವರ ಭಾವಚಿತ್ರವನ್ನೇ ಅಸ್ತ್ರವಾಗಿಟ್ಟುಕೊಂಡು, ನೈತಿಕ ಮೌಲ್ಯಗಳ ಪುನರ್ ಪ್ರತಿಷ್ಠಾಪನೆ ಮಾಡಬೇಕಾದ ಅಗತ್ಯವಿದೆ ಎಂದು ಹೆಚ್.ಕೆ. ಪಾಟೀಲ್ ಪ್ರತಿಪಾದಿಸಿದರು.

ರಾಜಕಾರಣಿಗಳು, ಸ್ವಯಂ ಸೇವಕರು, ಸಾಮಾಜಿಕ ಮುಖಂಡರು, ಮೌಲ್ಯವನ್ನು ಕೈಬಿಟ್ಟ ಪರಿಣಾಮ ಸಮಾಜ ನೈತಿಕವಾಗಿ ಅಧಃಪತನಕ್ಕೆ ಇಳಿದಿದೆ. ಈ ಸಂದರ್ಭದಲ್ಲಿ ಗಾಂಧಿಯವರ ತತ್ವವನ್ನು ಎಲ್ಲರೂ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ದೇಶದಲ್ಲಿರುವ ಅಸಮಾನತೆಯನ್ನು ಹೋಗಲಾಡಿಸಿ, ಸಮಾನತೆಯ ಸಮಾಜ ನಿರ್ಮಾಣವಾಗಬೇಕು. ಅಸಮಾನತೆ ಹೋಗಲಾಡಿಸದಿದ್ದರೆ, ಗಾಂಧೀಜಿಯವರ ಆತ್ಮಕ್ಕೆ (2ನೇ ಪುಟ ನೋಡಿ)

## ಕರ್ನಾಟಕ ಬಯಲು ಬಹಿರ್ದೆಸೆ

ಶಾಂತಿ ದೊರಕದು ಎಂದು ಅವರು ಹೇಳಿದರು.

ಕಾರ್ಯಕ್ರಮದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಡಾ.ಹೋ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ, ವಾರ್ತಾ ಇಲಾಖೆಯ ನಿರ್ದೇಶಕ ಎನ್.ಆರ್. ವಿಶುಕುಮಾರ್, ಸಮಾಜವಾದಿ ಚಿಂತಕ ಡಿ.ಎ. ನಾಗಭೂಷಣ್, ಮತ್ತಿತರರು ಉಪಸ್ಥಿತರಿದ್ದರು.

BANGALORE

ಗುರುವಾರ
26 ಜೂನ್ 201

# ಎ.ಎಚ್. ಬಸವರಾಜುಗೆ ಅಭಿನಂದನೆ



ಕಲಾನವರಂಗ ಸಂಸ್ಥೆ ವತಿಯಿಂದ ಬುಧವಾರ ಬಿಬಿಎಂಪಿ ಕಾಮಗಾರಿ ಸ್ಥಾಯಿ ಸಮಿತಿ ಅಧ್ಯಕ್ಷ ಎ.ಎಚ್. ಬಸವರಾಜು ಅವರನ್ನು ಸನ್ಮಾನಿಸಲಾಯಿತು.

ಬೆಂಗಳೂರು: ಸಮಾಜಮುಖಿಯಾಗಿ ಕೆಲಸ ಮಾಡುವ ಜನಪರ ನಾಯಕರು ಹೆಚ್ಚಾಗಿ ರಾಜಕೀಯ ಕ್ಷೇತ್ರಕ್ಕೆ ಬರಬೇಕೆಂದು ಶೇಷಾದ್ರಿಪುರ ಎಜುಕೇಷನಲ್ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಹೇಳಿದರು.

ಬಿಬಿಎಂಪಿ ಕಾಮಗಾರಿ ಸ್ಥಾಯಿ ಸಮಿತಿ ಅಧ್ಯಕ್ಷ ಎ.ಎಚ್. ಬಸವರಾಜು ಅವರಿಗೆ ಕಲಾನವರಂಗ ಸಂಸ್ಥೆ ರವೀಂದ್ರ ಕಲಾಕ್ಷೇತ್ರದಲ್ಲಿ ಹಮ್ಮಿಕೊಂಡಿದ್ದ ಅಭಿನಂದನಾ ಸಮಾರಂಭದಲ್ಲಿ ಮಾತನಾಡಿದರು.

ಏಕಗವಾಕ್ಷಿ ಯೋಜನೆ ಜಾರಿಗೆ ತಂದು ನಗರದ ಅಭಿವೃದ್ಧಿಗೆ ಬಸವರಾಜು ಮಹತ್ವದ ಕೊಡುಗೆ ನೀಡುತ್ತಿದ್ದಾರೆ. ಪಕ್ಷಭೇದ ಮಾಡದೆ ಅಭಿವೃದ್ಧಿ ಕಾಮಗಾರಿಗೆ ಸಹಕಾರ ನೀಡುತ್ತಿದ್ದಾರೆ ಎಂದು ಉಪ ಮೇಯರ್ ಇಂದಿರಾ ಹೇಳಿದರು. ಬಿಬಿಎಂಪಿ ಸದಸ್ಯ ಸಂಪತ್ ರಾಜು, ಗಂಗೋತ್ರಿ ಬಳಗದ ತಿಮ್ಮಯ್ಯ ಉಪಸ್ಥಿತರಿದ್ದರು.



ವಿಜಯ ಕರ್ನಾಟಕ
ಸೋಮವಾರ,16 ಜೂನ್ 2014, ಬೆಂಗಳೂರು

### ಎಸ್.ಜಿ. ಸಿದ್ದರಾಮಯ್ಯ ಟೀಕೆ

# ಬಂಡವಾಳಶಾಹಿಗಳಿಂದ ದೇಶದ ಭವಿಷ್ಯಕ್ಕೆ ಅಪಾಯ

**ವಿಕ ಸುದ್ದಿಲೋಕ** ಬೆಂಗಳೂರು

ಕೋಮುವಾದಿ ಮತ್ತು ಬಂಡವಾಳಶಾಹಿಗಳು ದೇಶದ ಚುಕ್ಕಾಣಿ ಹಿಡಿದಿರುವುದರಿಂದ ಭಾರತ ನೂರು ವರ್ಷ ಹಿಂದಕ್ಕೆ ಹೋಗುತ್ತದೆ ಎಂದು ಕನ್ನಡ ಪುಸ್ತಕ ಪ್ರಾಧಿಕಾರ ಮಾಜಿ ಅಧ್ಯಕ್ಷ ಪ್ರೊ.ಎಸ್.ಜಿ. ಸಿದ್ದರಾಮಯ್ಯ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನ ಸೇರಿದಂತೆ ನಾನಾ ಸಂಘಟನೆಗಳ ಸಹಯೋಗ ದೊಂದಿಗೆ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಮೈಲಾರ ಮಹಾದೇವ ದತ್ತಿ ಕಾರ್ಯಕ್ರಮ 'ಮಹಾತ್ಮಾ ಗಾಂಧಿ ಮತ್ತು ಸಮಕಾಲೀನ ಚಿಂತಕರು-ಸಾಂಸ್ಕೃತಿಕ ಸಂವಾದ' ಸಮಾರೋಪ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

''ಕೋಮುವಾದಿಗಳು ದೇಶದ ಚುಕ್ಕಾಣಿ ಹಿಡಿದಿದ್ದಾರೆ. ಅದಕ್ಕೆ ಬಂಡವಾಳಶಾಹಿಗಳು ಬೆಂಬಲವಾಗಿ ನಿಂತಿದ್ದಾರೆ. ಬಂಡವಾಳ ಹಾಕಿದವನು ಲಾಭ ನಿರೀಕ್ಷಿಸುವುದು ಸಹಜ. ಇದರಿಂದ ದೇಶ ದರಿದ್ರ ಸ್ಥಿತಿಗೆ ತಳ್ಳಲ್ಪಡುತ್ತದೆ. ಅಲ್ಲದೆ, ದೇಶದಾದ್ಯಂತ 58 ಮಂದಿ ಬ್ರಾಹ್ಮಣ ಸಂಸದರಿದ್ದಾರೆ. ಅದರಲ್ಲಿ 48 ಮಂದಿ ಬಿಜೆಪಿಗೆ ಸೇರಿದ್ದಾರೆ. ತಾವೇ ಹೆಚ್ಚಿನ ಸಂಖ್ಯೆಯಲ್ಲಿ ಅವಕಾಶ ಪಡೆಯುವ ಮೂಲಕ ದಲಿತರು, ಹಿಂದುಳಿದವರನ್ನು ಸಂಸತ್ತು ಪ್ರವೇಶಿಸುವುದಕ್ಕೂ ಬಿಡುತ್ತಿಲ್ಲ,''ಎಂದರು.

''ವರ್ಣವ್ಯವಸ್ಥೆಯ ಬಗ್ಗೆ ಇಂದಿನ ಮೂರನೇ ತಲೆಮಾರಿಗೆ ತಿಳಿದಿಲ್ಲ. ಅನಾದಿ ಕಾಲದಿಂದಲೂ ದಲಿತರು, ಅಸ್ಪೃಶ್ಯರನ್ನು ಶೋಷಿಸಿಕೊಂಡು ಬಂದಿರುವುದನ್ನು ಇಂದಿನ ಮಕ್ಕಳಿಗೆ, ಕಾಲೇಜು ಯುವಕರಿಗೆ ತಿಳಿಸಬೇಕು. ಚರಿತ್ರೆ ತಿಳಿಯದಿದ್ದರೆ ವರ್ತಮಾನ ಅರ್ಥ ಆಗುವುದಿಲ್ಲ, ವರ್ತಮಾನ ಅರ್ಥೈಸದಿದ್ದರೆ ಭವಿಷ್ಯ ರೂಪಿಸಲು ಆಗುವುದಿಲ್ಲ. ಜಾತಿ ವ್ಯವಸ್ಥೆ ಎಂಬುದು ಹಿಂದೆ ಮೂರ್ತ ರೂಪದಲ್ಲಿದ್ದರೆ, ಇಂದು ಅಮೂರ್ತ ರೂಪದಲ್ಲಿ ಇನ್ನೂ ಜಾರಿಯಲ್ಲಿದೆ ಎಂದರು.

ದಲಿತ ಸಂಘರ್ಷ ಸಮಿತಿ ರಾಜ್ಯ ಸಂಚಾಲಕ ಮಾವಳ್ಳಿ ಶಂಕರ್, ''ಮಹಾತ್ಮಾಗಾಂಧಿಗೆ ಬ್ರಿಟೀಷರಿಂದ ಭಾರತದ ಬಿಡುಗಡೆ ಮುಖ್ಯವಾಗಿದ್ದರೆ, ಅಂಬೇಡ್ಕರ್ ಅವರಿಗೆ ಸಾಮಾಜಿಕ ಅಸಮಾನತೆಯ ಬಿಡುಗಡೆ ಮುಖ್ಯವಾಗಿತ್ತು. ಅದಕ್ಕಾಗಿ ಅವರು ದೇಶ ವಿದೇಶಗಳಲ್ಲಿಯೂ ಹೋರಾಟ ಮಾಡಿದರು. ಆದರೆ, ಶೋಷಿತರ ಪರವಾಗಿ ದನಿ ಎತ್ತಿದವರನ್ನು ಚರಿತ್ರೆಯಲ್ಲಿ ಮರೆಮಾಚುವ ಹುನ್ನಾರ ನಡೆಯಿತು. ಅಂಬೇಡ್ಕರ್ ಅಂಥವರನ್ನು ಕಡೆಗಣಿಸಿ ಚರಿತ್ರೆ ದಾಖಲಿಸಲಾಯಿತು. ಇಂತಹ ಹುನ್ನಾರದ ಮರುವ್ಯಾಖ್ಯಾನ ಆಗಬೇಕಿದೆ,'' ಎಂದರು.

ಮಾಜಿ ಸಭಾಪತಿ ಬಿ.ಜಿ. ಬಣಕಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ, ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಪ್ರೊ.ಬಿ.ಕೃಷ್ಣಪ್ಪ ಟ್ರಸ್ಟ್ ಅಧ್ಯಕ್ಷೆ ಇಂದಿರಾ ಕೃಷ್ಣಪ್ಪ ಮತ್ತಿತರರು ಉಪಸ್ಥಿತರಿದ್ದರು.

ಕೆಪಿಎನ್




ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಮೈಲಾರ ಮಹಾದೇವ ದತ್ತಿ ಕಾರ್ಯಕ್ರಮದ ಸಮಾರೋಪ ಸಮಾರಂಭದಲ್ಲಿ ಪ್ರೊ. ಎಸ್.ಜಿ. ಸಿದ್ದರಾಮಯ್ಯ, ಬಿ.ಜಿ. ಬಣಕಾರ್, ಡಾ.ಹೊ. ಶ್ರೀನಿವಾಸಯ್ಯ ಮತ್ತಿತರರು ಇದ್ದರು.

ಪ್ರಜಾವಾಣಿ ಗುರುವಾರ 20 ಮಾರ್ಚ್ 2014

ಭಾರತೀಯ ಸಂಶೋಧನಾ ಪರಿಷತ್ ಅಧ್ಯಕ್ಷ ಪಂಚಮುಖಿ ಅಭಿಮತ

# ಬೌದ್ಧಿಕ ಗುಣಮಟ್ಟ ಸುಧಾರಣೆಗೆ ಶಿಕ್ಷಣ ಅಗತ್ಯ

ಪ್ರಜಾವಾಣಿ ವಾರ್ತೆ

ಯಲಹಂಕ: ಶಿಕ್ಷಣ ಸಂಸ್ಥೆಗಳು ಬೌದ್ಧಿಕ ಗುಣಮಟ್ಟವನ್ನು ಸುಧಾರಿಸುವಲ್ಲಿ ಪ್ರಮುಖಪಾತ್ರ ವಹಿಸಬೇಕು ಎಂದು ಭಾರತೀಯ ಸಾಮಾಜಿಕ ವಿಜ್ಞಾನ ಸಂಶೋಧನಾ ಪರಿಷತ್ತಿನ (ನವದೆಹಲಿ) ಮಾಜಿ ಅಧ್ಯಕ್ಷ ಡಾ.ವಿ. ಆರ್.ಪಂಚಮುಖಿ ಹೇಳಿದರು.

ಶೇಷಾದ್ರಿಪುರ ಪ್ರಥಮದರ್ಜೆ ಕಾಲೇ ಜಿನಲ್ಲಿ ನಡೆದ 'ಜಾಗತಿಕ ಪರಿವರ್ತನೆಗಳು' ಕುರಿತ ಅಂತರ ರಾಷ್ಟ್ರೀಯ ವಿಚಾರಸಂಕಿರಣದಲ್ಲಿ ಮಾತನಾಡಿದರು.

ಮೌಲ್ಯಾಧಾರಿತ ಶಿಕ್ಷಣ ಇಂದಿನ ಅವಶ್ಯಕತೆಯಾಗಿದ್ದು, ಶಿಕ್ಷಣ ಸಂಸ್ಥೆಗಳು ಜ್ಞಾನಮುಖಿಯಾಗಬೇಕು ಎಂದರು.

ಅಂತರರಾಷ್ಟ್ರೀಯ ಉತ್ಪಾದನಾ ವಿಜ್ಞಾನಸಂಸ್ಥೆಯ(ಯು.ಕೆ) ಅಧ್ಯಕ್ಷ ಡಾ.ಜಾನ್‌ಹೀಪ್ ಮಾತನಾಡಿ, ಮಕ್ಕಳ ನ್ನು ಅಧ್ಯಯನಶೀಲರನ್ನಾಗಿ ಮಾಡಲು ಶ್ರಮವಹಿಸಬೇಕು ಎಂದರು.



ಯಲಹಂಕದ ಶೇಷಾದ್ರಿಪುರ ಪ್ರಥಮದರ್ಜೆ ಕಾಲೇಜಿನಲ್ಲಿ ನಡೆದ 'ಜಾಗತಿಕ ಪರಿವರ್ತನೆಗಳು' ಕುರಿತ ಅಂತರರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಭಾರತೀಯ ಸಾಮಾ ಜಿಕ ವಿಜ್ಞಾನ ಸಂಶೋಧನಾ ಪರಿಷತ್ತಿನ(ನವದೆಹಲಿ) ಮಾಜಿ ಅಧ್ಯಕ್ಷ ಡಾ.ವಿ. ಆರ್.ಪಂಚಮುಖಿ ಉದ್ಘಾಟಿಸಿದರು. ಅಂತರರಾಷ್ಟ್ರೀಯ ಉತ್ಪಾದನಾ ವಿಜ್ಞಾನ ಸಂಸ್ಥೆಯ(ಯು.ಕೆ) ಅಧ್ಯಕ್ಷ ಡಾ.ಜಾನ್‌ಹೀಪ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ ಇತರರು ಇದ್ದಾರೆ

ಈ ಸಂಜೆ ಬುಧವಾರ, 19 ಮಾರ್ಚ್ 2014




ಯಲಹಂಕದ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಉನ್ನತ ಶಿಕ್ಷಣ ಮತ್ತು ಮಾಹಿತಿ ತಂತ್ರಜ್ಞಾನದ ಬಗ್ಗೆ ಹೆಚ್ಚಿನ ಅರಿವು ಸಮ್ಮೇಳನದಲ್ಲಿ ಇಂಗ್ಲೆಂಡ್‌ನ ಡಾ. ಜಾನ್ ಡೀಪ್ ಅವರು ವಿದ್ಯಾರ್ಥಿಗಳಿಗೆ ಮಾಹಿತಿ ತಂತ್ರಜ್ಞಾನದ ಬಗ್ಗೆ ಅರಿವು ಮೂಡಿಸಿದರು. ಕಾಲೇಜು ಆಡಳಿತ ಮಂಡಳಿಯ ಡಾ. ವೂಡೇ ಪಿ. ಕೃಷ್ಣ, ಡಾ. ಎಂ. ಪ್ರಕಾಶ್, ಎಸ್. ಎನ್. ವೆಂಕಟೇಶ್, ಡಾ. ಪಂಚಮುಖಿ ಮತ್ತಿತರರು ಉಪಸ್ಥಿತರಿದ್ದರು.

# ಸಹನೆ, ಅರಿವು, ಸಾಮರ್ಥ್ಯಗಳಿಂದ ಮಹಿಳೆಯರು ಪುರುಷರಿಗೆ ಸರಿಮಿಗಿಲಾಗಿ ಯಶಸ್ಸುಗಳಿಸಲು ಸಾಧ್ಯ

-ಡಾ. ವೂಡೆ ಪಿ. ಕೃಷ್ಣ

ಮಹಿಳೆಯರು ಸಹನಶೀಲತೆ ರೂಢಿಸಿಕೊಂಡು ಅರಿವು ಮೂಡಿಸಿಕೊಂಡು ವಹಿಸಿಕೊಂಡ ಜವಾಬ್ದಾರಿಯ ಬಗೆಗೆ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಲ್ಲಿ ಯಾವುದೇ ಕ್ಷೇತ್ರದಲ್ಲಿಯೂ ಪುರುಷರಿಗೆ ಸರಿಮಿಗಿಲಾಗಿ ಕಾರ್ಯನಿರ್ವಹಿಸಿ ಯಶಸ್ಸು ಪಡೆಯಲು ಸಾಧ್ಯ. ಇದಕ್ಕೆ ನಮ್ಮ ಮುಂದೆ ಅನೇಕ ಉದಾಹರಣೆಗಳಿವೆ ಎಂದು ಕನ್ನಡಪರ ಚಿಂತಕರೂ, ಶಿಕ್ಷಣ ತಜ್ಞರೂ ಆದ ಡಾ. ವೂಡೆ ಪಿ. ಕೃಷ್ಣ ಅಭಿಪ್ರಾಯಪಟ್ಟರು.

ಕನ್ನಡ ಸಂಘರ್ಷ ಸಮಿತಿಯು ಮಾರ್ಚ್ ೮ರಂದು ಸಂಜೆ ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಆಯೋಜಿಸಿದ್ದ 'ನಿಸ್ಸೀಮ ಕನ್ನಡತಿ' ಪ್ರಶಸ್ತಿ ಪ್ರದಾನ ಸಮಾರಂಭದ ಅಧ್ಯಕ್ಷತೆ ವಹಿಸಿ ಅವರು ಮಾತನಾಡುತ್ತಿದ್ದರು.

ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಗಾಂಧೀಜಿಯವರಿಗೆ ಹೆಗಲೆಣೆಯಾಗಿ ಕಸ್ತೂರ್‌ಬಾ ಗಾಂಧಿಯವರೂ ಹೋರಾಟ ಮಾಡಿದ್ದಾರೆ. ಬ್ಯಾರಿಸ್ಟರ್ ಆಗಿದ್ದ ಗಾಂಧೀಜಿಯವರು ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಆಗಿ ರೂಪುಗೊಂಡ ಹಿನ್ನೆಲೆಯಲ್ಲಿ ಕಸ್ತೂರ್ ಬಾ ಗಾಂಧಿಯವರ ತ್ಯಾಗ, ಸಹನಶೀಲನೆ, ಹೊಂದಿಕೊಂಡು ಹೋಗುವ ಮನೋಭಾವ ಪರಿಣಾಮಕಾರಿ ಪಾತ್ರ ನಿರ್ವಹಿಸಿದೆ ಎಂದು ಅಭಿಪ್ರಾಯಪಟ್ಟ ಡಾ. ಕೃಷ್ಣ ಅವರು ನಮ್ಮ ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಸಕ್ರಿಯವಾಗಿ ತೊಡಗಿಸಿಕೊಳ್ಳಲಾಗದಿದ್ದವರು ತಮ್ಮ ಗಂಡಂದಿರ ಹೋರಾಟಕ್ಕೆ ಬೆಂಬಲವಾಗಿ ನಿಂತು ಮನೆ-ಮಕ್ಕಳ ಯೋಗಕ್ಷೇಮ ನೋಡಿಕೊಂಡು ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸಿ, ಪರೋಕ್ಷವಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ತೊಡಗಿಸಿಕೊಂಡಿರುವುದನ್ನು ಮರೆಯಲಾಗದು ಎಂದರು.

## ಸಾಹಿತ್ಯ ಸಾಧನೆಗೆ ಸಾಕ್ಷಿ

ಒಂದೇ ಸಮಾರಂಭ ಒಂದೇ ವೇದಿಕೆಯಲ್ಲಿ ಹತ್ತಾರು ಮಂದಿಗೆ ಪ್ರಶಸ್ತಿ ಪ್ರದಾನ ಮಾಡುವ ಇಂದಿನ ದಿನಗಳಲ್ಲಿ ಪ್ರಶಸ್ತಿ ಪುರಸ್ಕಾರಗಳು ಅರ್ಥ ಕಳೆದುಕೊಳ್ಳುತ್ತಿರುವಾಗ ಕನ್ನಡ ಸಂಘರ್ಷ ಸಮಿತಿಯು ರತ್ನಾಕಾಳೇಗೌಡ ಒಬ್ಬರಿಗೆ 'ನಿಸ್ಸೀಮ ಕನ್ನಡತಿ' ಪ್ರಶಸ್ತಿ ನೀಡಿ ಗೌರವಿಸುತ್ತಿರುವುದು ರತ್ನಾ ಅವರ ಕನ್ನಡಪರ ಹೋರಾಟ ಹಾಗೂ ಸಾಹಿತ್ಯ ಸಾಧನೆಗೆ ಸಾಕ್ಷಿಯಾಗಿದೆ. ಈ ಪ್ರಶಸ್ತಿಯಿಂದ ಅವರು ತಮ್ಮ ಬರವಣಿಗೆಯನ್ನು ಮತ್ತಷ್ಟು ಉತ್ತಮಪಡಿಸಿಕೊಳ್ಳಲು ಸಹಕಾರಿಯಾಗಲಿದೆ ಎಂದು ಅಭಿನಂದಿಸಿದರು.




ಹಿರಿಯ ಕನ್ನಡ ಕಾರ್ಯಕರ್ತೆ ಹಾಗೂ ಲೇಖಕಿ ಎ.ಜಿ. ರತ್ನಾಕಾಳೇಗೌಡ ಅವರಿಗೆ ನಿಸ್ಸೀಮ ಕನ್ನಡತಿ ಪ್ರಶಸ್ತಿ ಪ್ರದಾನ ಮಾಡಿದ ಚಿತ್ರ. ರಾಮಣ್ಣ ಕೋಡಿಹೊಸಹಳ್ಳಿ, ಡಾ. ವೂಡೆ ಪಿ. ಕೃಷ್ಣ, ರಾಣಿ ಸತೀಶ್ ಮತ್ತು ಗಾಯತ್ರಿ ರಾಮಣ್ಣ ಇದ್ದಾರೆ.

ಆಧುನಿಕ ಮಹಿಳೆಯರು ವಿಶೇಷವಾಗಿ ಐ.ಟಿ-ಬಿ.ಟಿ. ಉದ್ಯಮದ ಮಹಿಳೆಯರು ಸಣ್ಣ - ಪುಟ್ಟದಕ್ಕೆಲ್ಲಾ ತಾಳ್ಮೆ ಕಳೆದುಕೊಂಡು ವೈವಾಹಿಕ ಜೀವನವನ್ನು ಕಡಿದುಕೊಳ್ಳುವುದಕ್ಕೆ ಹೆಚ್ಚು ಮುಂದಾಗುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ ಎಂದು ಡಾ. ವೂಡೆ ಪಿ. ಕೃಷ್ಣ ವಿಷಾದಿಸಿದರು.

ಹಿಂದೆ ಬ್ರಿಟಿಷರ ಆಡಳಿತಾವಧಿಯಲ್ಲಿ ಸಮಾಜವನ್ನು ವರ್ಗೀಕರಿಸಿ 'ರಾವ್ ಬಹದ್ದೂರ್' 'ಖಾನ್ ಬಹದ್ದೂರ್' ಎಂಬ ಬಿರುದು ನೀಡಲಾಗುತ್ತಿತ್ತು. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಂಥ ಬಿರುದುಗಳಿಗೆ ಅವಕಾಶವಿಲ್ಲ. ವ್ಯಾಸಂಗದಿಂದ ಗಳಿಸಿಕೊಂಡ ಪಿ.ಎಚ್.ಡಿ. ಪ್ರಬಂಧ ರಚಿಸಿದವರು 'ಡಾಕ್ಟರ್' ಎಂದು ಹೆಸರಿನ ಮುಂದೆ ಬಳಸಬಹುದೇ ಹೊರತು, ವಿಶ್ವವಿದ್ಯಾಲಯ ನೀಡುವ ಗೌರವ ಡಾಕ್ಟರೇಟ್ ಪದವಿಯನ್ನು ಹೆಸರಿನ ಮುಂದೆ ಬಳಸುವಂತಿಲ್ಲ. ಅದೇ ರೀತಿ ಪದ್ಮಶ್ರೀ, ಪದ್ಮಭೂಷಣ ಇತ್ಯಾದಿಗಳನ್ನು ಸಹ ಬಳಸುವುದು ಸಲ್ಲದು ಎಂದು ವೂಡೆ ಪಿ. ಕೃಷ್ಣ ಅಭಿಪ್ರಾಯಪಟ್ಟರು.

## ಮಹಿಳಾ ಸಮಾನತೆ ಕಾಳಜಿ

ರತ್ನಾಕಾಳೇಗೌಡರಿಗೆ "ನಿಸ್ಸೀಮ ಕನ್ನಡತಿ" ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಖಾತೆಯ ಮಾಜಿ ಸಚಿವೆ ರಾಣಿ ಸತೀಶ್ ಅವರು ಯಾವುದೇ ಅಧಿಕಾರದಲ್ಲಿಲ್ಲದಿದ್ದರೂ ತಮ್ಮನ್ನು ನೆನಪುಮಾಡಿಕೊಂಡು ಈ ಕಾರ್ಯಕ್ರಮಕ್ಕೆ ಆಹ್ವಾನಿಸಿದ ಕನ್ನಡ ಸಂಘರ್ಷ ಸಮಿತಿಯ ಔದಾರ್ಯ, ಮಹಿಳಾ ಸಮಾನತೆ ಬಗ್ಗೆ ಹೊಂದಿರುವ ಕಾಳಜಿ ಬಗೆಗೆ ಶ್ಲಾಘಿಸಿ, ಸಮಿತಿಯ ಚಟುವಟಿಕೆಯ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದರು.

ಸ್ತ್ರೀ ಸಮಾನತೆ, ಮಹಿಳೆಯ ರಕ್ಷಣೆ ಬಗೆಗೆ ಇಂದು ಸಾಕಷ್ಟು ಮಾತನಾಡುತ್ತಿದ್ದರೂ ನಿಜವಾದ ಅರ್ಥದಲ್ಲಿ ಮಹಿಳೆಯರ ಸಂಬಂಧದಲ್ಲಿನ ವಿದ್ಯಮಾನಗಳು ನಿಜವಾಗಿ ಆಂತಕಕಾರಿಯಾಗಿ ಪರಿಣಮಿಸಿವೆ. ಗಾಂಧೀಜಿಯವರು ಅರ್ಧರಾತ್ರಿಯಲ್ಲಿ ಮಹಿಳೆ ಒಂಟಿಯಾಗಿ ನಿರ್ಭೀತಿಯಿಂದ ತಿರುಗಾಡುವ ಪರಿಸ್ಥಿತಿ ನಿರ್ಮಾಣವಾಗಬೇಕೆಂದು ಆಶಿಸಿದ್ದರು. ಆದರೆ ಇಂದು ಹಾಡುಹಗಲೇ ಮಹಿಳೆಯರಿಗೆ ರಕ್ಷಣೆ ಇಲ್ಲದಂತಹ ಪರಿಸ್ಥಿತಿ ತಲೆದೋರಿದೆ. ಮಹಿಳೆಯರ ಮೇಲೆ ಲೈಂಗಿಕ ಕಿರುಕುಳ ಹೆಚ್ಚುತ್ತಲಿದೆ ಎಂದು ವಿಷಾದಿಸಿದರು.

ಗ್ರಾಮೀಣ ಪ್ರದೇಶದಲ್ಲಿ ಗ್ರಾಮ ಪಂಚಾಯ್ತಿ ಮೊದಲಾದ ಸಂಸ್ಥೆಗಳಲ್ಲಿ ಪುರುಷರೇ ತಮ್ಮ ಪತ್ನಿಯರ ಅಧಿಕಾರ ಚಲಾಯಿಸುತ್ತಿದ್ದಾರೆ. ಮಹಿಳೆಯರು ತಮ್ಮ ಅಧಿಕಾರವನ್ನು ತಾವೇ ನಿರ್ವಹಿಸುವ ಚಾತುರ್ಯ-ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕೆಂದು ಆಶಿಸಿದ ರಾಣಿ ಸತೀಶ್ ಅವರು ಸಂಸತ್ತು ಹಾಗೂ ವಿಧಾನಮಂಡಲಗಳಲ್ಲಿ ಮಹಿಳಾ ಮೀಸಲಾತಿ ಕಾನೂನು ರಚನೆ ಮರೀಚಿಕೆಯಾಗಿದೆ ಎಂದರು.

ರತ್ನಾಕಾಳೇಗೌಡರು ತಮ್ಮ ಕನ್ನಡ ಪರ ಹೋರಾಟ ಸಾಮಾಜಿಕ ಕಳಕಳಿ ಹಾಗೂ ಸಾಹಿತ್ಯ ಸಾಧನೆಯಿಂದ ಇಂದು 'ನಿಸ್ಸೀಮ ಕನ್ನಡತಿ' ಪ್ರಶಸ್ತಿಗೆ ಭಾಜನರಾಗುತ್ತಿರುವುದು ಅಭಿನಂದನೀಯ ಎಂದರು.

## ಮಹಿಳಾ ಮೀಸಲಾತಿ

ಮುಖ್ಯ ಅತಿಥಿಯಾಗಿ ಪಾಲ್ಗೊಂಡಿದ್ದ ಸಮಿತಿಯ ಸಂಸ್ಥಾಪಕ ಸದಸ್ಯರೂ ಆದ ಹಿರಿಯ ಪತ್ರಕರ್ತ ರಾಮಣ್ಣ ಕೋಡಿಹೊಸಹಳ್ಳಿಯವರು ಸಂಸತ್ತಿನಲ್ಲಿ ಮಹಿಳಾ ಮೀಸಲಾತಿ ಮಸೂದೆ ಇನ್ನು ಅನುಮೋದನೆ ಪಡೆಯದಿರುವುದಕ್ಕೆ ಮಹಿಳೆಯರಿಗೆ ನೀಡಬೇಕೆಂದಿರುವ ಶೇ.೩೩ರಷ್ಟು ಮೀಸಲಾತಿಯಲ್ಲಿ ಸಮಾಜದ ಬಲಿಷ್ಠ ಸಮುದಾಯಗಳೇ ಈ ಸೌಲಭ್ಯದ ಸಿಂಹಪಾಲು ಪಡೆದುಕೊಳ್ಳಬಹುದಾಗಿರುವುದರಿಂದ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಜಾತಿ ಜನಸಂಖ್ಯೆ ಆಧಾರಿತ ಮೀಸಲಾತಿ ದಕ್ಕಬೇಕೆಂಬ ಸಮಾಜವಾದಿ ಪಕ್ಷ ಮತ್ತಿತರ ಸಮಾಜಮುಖಿ ಚಿಂತಕರ ವಾದದಲ್ಲಿ ಅರ್ಥವಿದೆ ಎಂದರು.

ಕನ್ನಡ ಸಂಘರ್ಷ ಸಮಿತಿ ತನ್ನ ೩೫ ವರ್ಷಗಳ ಇತಿಹಾಸದಲ್ಲಿ ನಡೆಸಿದ ಕನ್ನಡಪರ ಹೋರಾಟ, ಚಟುವಟಿಕೆಗಳು ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ರೂಪುಗೊಂಡವುಗಳೆಂದು ಹಿಂದೆ ವಿ.ಪಿ. ಸಿಂಗ್ ಅವರ ಭಾರತ ಒಕ್ಕೂಟ ಸರ್ಕಾರ ಹಿಂದುಳಿದ ವರ್ಗಗಳವರಿಗೆ ಮೀಸಲಾತಿ ಸೌಲಭ್ಯ ಕಲ್ಪಿಸಲು ಮುಂದಾದಾಗ ಸಂಘಪರಿವಾರದವರು ಅದರ ವಿರುದ್ಧ ದೇಶವ್ಯಾಪಿ ಚಳವಳಿ ನಡೆಸಿದಾಗ ಸಮಿತಿಯು ಬೆಂಗಳೂರು ವಿಶ್ವವಿದ್ಯಾಲಯದ ಸೆನೆಟ್ ಸಭಾಂಗಣದಲ್ಲಿ 'ಜಾತಿ ಜನಸಂಖ್ಯೆ ಆಧಾರಿತ ಮೀಸಲಾತಿ' ನೀತಿಯ ಜಾರಿಗೆ ಒತ್ತಾಯಿಸಿ ವಿಚಾರ ಸಂಕಿರಣ ಆಯೋಜಿಸಿದ್ದುದನ್ನು ನೆನಪು ಮಾಡಿಕೊಂಡರು.

## ಮಹಾಕಾವ್ಯ ರಚನೆಯ ಗುರಿ

ಪ್ರಶಸ್ತಿ ಪುರಸ್ಕೃತೆ ಎ.ಜ.ರತ್ನಾಕಾಳೇಗೌಡ ಅವರು ಮಾತನಾಡಿ, ಕನ್ನಡ ಸಂಘರ್ಷ ಸಮಿತಿಯು ತಮಗೆ ಈ ಪ್ರಶಸ್ತಿ ನೀಡಿ ಗೌರವಿಸುತ್ತಿರುವುದಕ್ಕೆ ಅತ್ಯಂತ ಸಂತೋಷವಾಗಿದೆ. ಕಾರಣ ಸಮಿತಿ ಹಾಗೂ ಹಿಂದೆ ಅದರ ಅಧ್ಯಕ್ಷರಾಗಿ ರಾಮಣ್ಣ ಕೋಡಿಹೊಸಹಳ್ಳಿ ಯವರು ತಮಗೆ ಹಲವಾರು ಅವಕಾಶ ವೇದಿಕೆ ನೀಡಿ ಪ್ರೋತ್ಸಾಹಿಸಿದುದರಿಂದ ತಮಗೆ ಬರವಣಿಗೆಯಲ್ಲಿ ಹೆಚ್ಚಿನ ಆಸಕ್ತಿ ತಳೆಯಲು ಕಾರಣವಾಗಿ ಇಂದು ೪೫ಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಲು ಸಾಧ್ಯವಾಯಿತು. ಅವರಂತೆಯೇ ಹಲವಾರು ಸಂಘ-ಸಂಸ್ಥೆಗಳು ಹಿರಿಯ ಸಾಹಿತಿಗಳು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ ಎಂದು ತಮ್ಮ ಸಾಹಿತ್ಯ ಸಾಧನೆಯಲ್ಲಿ ನೆರವಾದ ಎಲ್ಲರನ್ನು ನೆನೆದರು. ಮುಂದೆ ಮಹಾಕಾವ್ಯವನ್ನು ರಚಿಸಲು ಸಿದ್ಧತೆ ಮಾಡಿಕೊಂಡಿರುವುದಾಗಿಯೂ ಹೇಳಿ ಸಮಾರಂಭಕ್ಕೆ ಬಂದು ತಮಗೆ ಶುಭ ಹಾರೈಸಿದ ಎಲ್ಲರಿಗೂ ಕೃತಜ್ಞತೆ ಸಲ್ಲಿಸಿದರು.

ಸಮಿತಿಯ ಅಧ್ಯಕ್ಷೆ ಗಾಯತ್ರಿ ರಾಮಣ್ಣ ಅವರು ಎಲ್ಲರನ್ನು ಸ್ವಾಗತಿಸುತ್ತ, ಸಮಿತಿಯ ಚಟುವಟಿಕೆಗಳ ಬಗೆಗೆ ತಿಳಿಸಿ, ಸಮಿತಿಯು ಈ ಹಿಂದೆ ಮಹಿಳಾ ವಿಭಾಗವನ್ನು ಪ್ರತ್ಯೇಕವಾಗಿ ಹೊಂದಿದ್ದು, ಡಾ. ಅನುಪಮ ನಿರಂಜನ ಅವರ ನೆನಪಿನಲ್ಲಿ ಬೆಂಗಳೂರು ಜಿಲ್ಲಾ ಮಹಿಳಾ ಸಾಹಿತ್ಯ ಸಮಾವೇಶವನ್ನು ಇಡೀ ದಿನ ಆಯೋಜಿಸಿ, ಹಿರಿಯ ಲೇಖಕಿಯೊಬ್ಬರನ್ನು ಸರ್ವಾಧ್ಯಕ್ಷೆಯಾಗಿ ಆಯ್ಕೆ ಮಾಡಿ ಗೌರವಿಸಲಾಗುತ್ತಿದ್ದುದನ್ನು ನೆನಪಿಸಿಕೊಂಡರು. ಮೊದಲಿಗೆ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ಬರೀ ವಿಚಾರಗೋಷ್ಠಿ ನಡೆಸುತ್ತಿದ್ದು, ಗಾಯಕಿ ಹಾಗೂ ಕನ್ನಡ ಕಾರ್ಯಕರ್ತೆ ಜಯ ಪಾರ್ಥಸಾರಥಿ ಅವರಿಗೆ 'ಕನ್ನಡ ಕಟ್ಟಾಳು' ಬಿರುದು ನೀಡಿದ ಸಂದರ್ಭದಲ್ಲಿ ಅವರಿಗೆ ನೀಡಿದ ಹಣಕ್ಕೆ ಮತ್ತಷ್ಟು ಹಣ ಸೇರಿಸಿ ಸಮಿತಿಯಲ್ಲಿ ದತ್ತಿಯನ್ನಿಟ್ಟು ಪ್ರತಿವರ್ಷ ಹಿರಿಯ ಕನ್ನಡ ಕಾರ್ಯಕರ್ತೆಯೊಬ್ಬರನ್ನು ಗೌರವಿಸುವ ಸಲಹೆ ನೀಡಿದರು. ಅಂದಿನಿಂದ 'ನಿಸ್ಸೀಮ ಕನ್ನಡತಿ' ಎಂಬ ಬಿರುದು ನೀಡುತ್ತಾ ಬಂದಿದ್ದು, ಇದೀಗ ಜನತಾಂತ್ರಿಕ ವ್ಯವಸ್ಥೆಗನುಗುಣವಾಗಿ ಬಿರುದು ಎಂಬುದರ ಬದಲು ಪ್ರಶಸ್ತಿ ಎಂದು ಬದಲಿಸಿ ನೀಡಲಾಗುತ್ತಿದೆ ಎಂದರು.

ಗಾಯಕಿ ವೇದಾವತಿ ಪ್ರಸನ್ನ ಅವರು ಹಾಡಿದ ನಾಡಗೀತೆಯಿಂದ ಆರಂಭಗೊಂಡ ಕಾರ್ಯಕ್ರಮವನ್ನು ಸಮಿತಿಯ ಸಂಘಟನಾ ಕಾರ್ಯದರ್ಶಿ ಹಾಗೂ ಶಿಕ್ಷಕಿ ಇಂದಿರಾ ಶರಣ್ ಜಮ್ಮಲದಿನ್ನಿ ನಿರೂಪಿಸಿದರು. ಮಹಿಳಾ ಸಂಚಾಲಕಿ ಕೆ. ಶಾಂತಲಾ ಸುರೇಶ ವಂದಿಸಿದರು.

ಪ್ರಶಸ್ತಿ ಪ್ರದಾನ ಕಾರ್ಯಕ್ರಮಕ್ಕೆ ಮುನ್ನ ಗಾಯಕಿಯರಾದ ಮಂಜುಳಾ ಮೋಹನ್, ಆರ್.ನೀಲಾಂಬಿಕೆ, ಪೂರ್ಣಿಮಾ, ತ್ರಿವೇಣಿರಾಜ್ ಕನ್ನಡ ಗೀತೆಗಳನ್ನು ಹಾಡಿದರು.

ಸಮಾರಂಭದಲ್ಲಿ 'ರತ್ನಧವಳ' ಅಭಿನಂದನಾ ಗ್ರಂಥ ಸಂಪಾದಕ ಬೆಳಗಾವಿಯ ದೇಶಪಾಂಡೆ, ಹಿರಿಯ ವಿಚಾರವಾದಿ ಲೇಖಕ ಎ.ಆರ್.ನಾರಾಯಣ ಘಟ್ಟ, ಹಿರಿಯ ಲೇಖಕಿ ಪ್ರೊ. ಬಿ. ನಾರಾಯಣಮ್ಮ, ಕ.ಸಾ.ಪ. ಗೌರವ ಕಾರ್ಯದರ್ಶಿ ಸಿ.ಕೆ. ರಾಮೇಗೌಡ, ಕನ್ನಡ ನುಡಿ ಮಾಜಿ ಸಂಪಾದಕ ಡಾ.ಕೋ.ವೆಂ. ರಾಮಕೃಷ್ಣೇಗೌಡ, ಮ. ರಾಮಮೂರ್ತಿ ಕನ್ನಡ ಬಳಗದ ಅಧ್ಯಕ್ಷ ವೆ.ಶ್ರೀನಿವಾಸ್, ಎಚ್.ಎ.ಎಲ್. ಕೇಂದ್ರೀಯ ಕನ್ನಡ ಸಂಘದ ಅಧ್ಯಕ್ಷ ಬಿ. ವಿಜಯಕುಮಾರ್, ಮಲ್ಲೇಶ್ವರ ಕ್ಷೇತ್ರ ಕ.ಸಾ.ಪ. ಮಾಜಿ ಅಧ್ಯಕ್ಷ ಹನುಮಂತರಾಯ, ಹಿರಿಯ ಕನ್ನಡ ಕಾರ್ಯಕರ್ತೆ ರಮಾದೇವಿ ವಿಶ್ವೇಶ್ವರಯ್ಯ, ಕವಯಿತ್ರಿ ಹಂಸಾ ಆರ್., ಕವಿ ಬಿ. ಶೃಂಗೇಶ್ವರ್ ಇವರೇ ಮೊದಲಾದವರು ಪಾಲ್ಗೊಂಡಿದ್ದರು.

ವರದಿ : ಇಂದಿರಾ ಶರಣ್ ಜಮ್ಮಲದಿನ್ನಿ




ನಿಸ್ಸೀಮ ಕನ್ನಡತಿ ಪ್ರಶಸ್ತಿ ಸ್ಥಾಪನೆಗೆ ಕಾರಣಕರ್ತರಾದ ದಿವಂಗತ ಸಾಕಮ್ಮ ಮುದ್ದಪ್ಪ ಅವರ ಭಾವಚಿತ್ರಕ್ಕೆ ಅತಿಥಿಗಳು ಪುಷ್ಪನಮನ ಸಲ್ಲಿಸುತ್ತಿರುವ ಚಿತ್ರ.

# ಡಾ. ಲಕ್ಷ್ಮೀನಾರಾಯಣ ಭಟ್ಟರಿಗೆ 'ಶ್ರೀಸಾಹಿತ್ಯ ಪ್ರಶಸ್ತಿ'

ಬೆಂಗಳೂರಿನ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಬಿ.ಎಂ.ಶ್ರೀಕಂಠಯ್ಯನವರ ಮೊಮ್ಮಗಳು ಕಮಲಿನಿ ಬಾಲೂರಾವ್ ಅವರು ಸ್ಥಾಪಿಸಿರುವ ದತ್ತಿನಿಧಿಯಿಂದ ಕೊಡಮಾಡುವ 'ಶ್ರೀ ಸಾಹಿತ್ಯಪ್ರಶಸ್ತಿ'ಯ ಪ್ರಥಮ ಪುರಸ್ಕೃತರಾಗಿ ಹಿರಿಯ ಕವಿ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಆಯ್ಕೆಯಾಗಿದ್ದಾರೆ.

ಈ ಪ್ರಶಸ್ತಿಯು ರೂ. ಒಂದು ಲಕ್ಷ ನಗದು ಹಾಗೂ ಪ್ರಶಸ್ತಿ ಪತ್ರ ಒಳಗೊಂಡಿದ್ದು, ಮಾರ್ಚ್ ೨೩ರಂದು ನೃಪತುಂಗ ರಸ್ತೆಯ ಮಿಥಿಕ್‌ಸೊಸೈಟಿಯ ಶತಮಾನೋತ್ಸವ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ಜರುಗಲಿದೆ ಎಂದು ಪ್ರತಿಷ್ಠಾನದ ಗೌರವಾಧ್ಯಕ್ಷ ಪ್ರೊ. ಎಂ.ಎಚ್. ಕೃಷ್ಣಯ್ಯ ತಿಳಿಸಿದ್ದಾರೆ.

ಪ್ರೊ. ಜಿ. ವೆಂಕಟ ಸುಬ್ಬಯ್ಯ ಅವರ ಅಧ್ಯಕ್ಷತೆಯಲ್ಲಿ ಹಿರಿಯ ಸಾಹಿತಿ ಡಾ. ಜಿ.ಎಸ್. ಆಮೂರ ಅವರು ಪ್ರಶಸ್ತಿ ಪ್ರದಾನ ಮಾಡಲಿದ್ದು ವಿಮರ್ಶಕ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಮುಖ್ಯ ಅತಿಥಿಯಾಗಿ ಪಾಲ್ಗೊಳ್ಳಲಿದ್ದಾರೆ ಎಂದು ಅವರು ತಿಳಿಸಿದ್ದಾರೆ.

ಪ್ರಜಾವಾಣಿ ಭಾನುವಾರ 16ನೇ ಫೆಬ್ರುವರಿ 2014

# 'ಆಂಧ್ರ ಕನ್ನಡ ಶಾಲೆಗೆ ರಾಜ್ಯ ಪಠ್ಯಪುಸ್ತಕ ನೀಡಲಿ'

ಮೊಳಕಾಲ್ಮುರು (ಚಿತ್ರದುರ್ಗ ಜಿಲ್ಲೆ): ಪ್ರತಿವರ್ಷ ಪಠ್ಯಪುಸ್ತಕ ಕೊರತೆ ಅನುಭವಿಸುವ ಆಂಧ್ರಪ್ರದೇಶದ ಕನ್ನಡ ಶಾಲೆಗಳಿಗೆ ಕರ್ನಾಟಕ ಸರ್ಕಾರವೇ ಪಠ್ಯಪುಸ್ತಕ ವಿತರಣೆ ಹೊಣೆ ಹೊರಲೇಬೇಕು ಎಂದು ಸಾಹಿತಿ, ಶಿಕ್ಷಣ ತಜ್ಞ ಡಾ.ವೊಡೆ ಪಿ.ಕೃಷ್ಣ ಆಗ್ರಹಿಸಿದರು.

ಆಂಧ್ರಪ್ರದೇಶ ರಾಯದುರ್ಗದಲ್ಲಿ ಶನಿವಾರದಿಂದ ಆರಂಭವಾದ 4ನೇ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅವರು ಮಾತನಾಡಿದರು.

ಅಂಕಿ–ಅಂಶಗಳ ಪ್ರಕಾರ ಆಂಧ್ರದಲ್ಲಿ 84 ಕನ್ನಡಶಾಲೆಗಳಲ್ಲಿ 17,400 ಮಕ್ಕಳಿದ್ದಾರೆ. ಪಠ್ಯಪುಸ್ತಕಗಳನ್ನು ಯಾವ ಸರ್ಕಾರ ಪೂರೈಕೆ ಮಾಡಬೇಕು ಎಂಬ ಸಮಸ್ಯೆ ಪ್ರತಿವರ್ಷ ಎದುರಾಗುತ್ತಿದೆ. ಈ ಬಗ್ಗೆ ಕರ್ನಾಟಕ ಸರ್ಕಾರಕ್ಕೆ ಮನವಿ ಸಲ್ಲಿಸಿದರೂ ಪ್ರಯೋಜನವಾಗಿಲ್ಲ. ಮುಂದಿನ ಶೈಕ್ಷಣಿಕ ವರ್ಷದಿಂದಲಾದರೂ ಪಠ್ಯಪುಸ್ತಕ ಪೂರೈಕೆ ಮಾಡಲು ಕ್ರಮಕ್ಕೆಗೊಳ್ಳಬೇಕು ಎಂದು ಮನವಿ ಮಾಡಿದರು.

ವೈದ್ಯ, ತಾಂತ್ರಿಕ ಸೇರಿದಂತೆ ಉನ್ನತ ಸ್ನಾತಕೋತ್ತರ ಪದವಿ ಶಿಕ್ಷಣದಲ್ಲಿ ಗಡಿನಾಡ ಕನ್ನಡಿಗರಿಗೆ ಮೀಸಲಾತಿ ಕಲ್ಪಿಸಬೇಕು. ಅದನ್ನು ಆಂಧ್ರಸರ್ಕಾರ ಜಾರಿ ಮಾಡಿದೆ. ಪ್ರಾದೇಶಿಕ ಅಸಮತೋಲನ ಸರಿಪಡಿಸಲು ಡಾ.ಬರಗೂರು ರಾಮಚಂದ್ರಪ್ಪ ಅವರ ವರದಿ ಜಾರಿ ಮಾಡಬೇಕು. ಗಡಿನಾಡ ಅಭಿವೃದ್ಧಿಗೆ ಶ್ರಮಿಸಿದ ಅನ್ಯ ಕನ್ನಡಿಗರಿಗೆ ಪ್ರಶಸ್ತಿ ನೀಡಬೇಕು ಎಂದು ಹೇಳಿದರು.

ಸಮ್ಮೇಳನ ಉದ್ಘಾಟಿಸಿ ಮಾತನಾಡಿದ ಹಂಪಿ ವಿಶ್ವವಿದ್ಯಾಲಯ ಕುಲಪತಿ ಡಾ.ಹಿ.ಚಿ.ಬೋರಲಿಂಗಯ್ಯ, ಆಂಧ್ರ ಸರ್ಕಾರ ಅಲ್ಲಿನ ಗಡಿನಾಡ ವಾಸಿಗಳಿಗೆ ಶೇ 5 ಮೀಸಲಾತಿ ನೀಡಿದೆ. ಆದರೆ, ಕಡ್ಡಾಯವಾಗಿ ಗಡಿನಾಡ ಕನ್ನಡಿಗರು 5 ವರ್ಷ ಕರ್ನಾಟಕದಲ್ಲಿ ವಾಸ ಅಥವಾ ಶಿಕ್ಷಣವನ್ನು ಕಡ್ಡಾಯ ಮಾಡಿರುವುದು ಅವೈಜ್ಞಾನಿಕವಾಗಿದೆ. ಈ ಪದ್ಧತಿ ಬೇರೆ ಯಾವ ರಾಜ್ಯದಲ್ಲಿಯೂ ಜಾರಿಯಲ್ಲಿಲ್ಲ ಎಂದು ದೂರಿದರು. ಶಾಸಕ ಕಾಪು ರಾಮಚಂದ್ರರೆಡ್ಡಿ, ಜಾನಪದ ತಜ್ಞ ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಅಗ್ರಹಾರಂ ಶಿವಪ್ರಸಾದ್ ಇದ್ದರು.

BANGALORE

ಭಾನುವಾರ
2 ಫೆಬ್ರವರಿ 2014

# ಅರ್ಧ ಆರೋಗ್ಯ ಹಾಳಾಗಿದೆ

## ರಾಜಕಾರಣಿಗಳ ಜತೆ ಹೆಣಗಿ ಸಾಕಾಗಿದೆ: ರಾಜ್ಯಪಾಲ ಬೇಸರ

ಬೆಂಗಳೂರು: ಈ ರಾಜಕಾರಣಿಗಳ ಜತೆ ಹೆಣಗಾಡಿ ನನ್ನ ಅರ್ಧ ಆರೋಗ್ಯ ಹಾಳಾಗಿದೆ. ಜನರು ಇವರನ್ನು ಹೇಗೆ ಸಹಿಸಿಕೊಂಡಿದ್ದಾರೋ... ಎಂದು ರಾಜ್ಯಪಾಲ ಎಚ್.ಆರ್.ಭಾರದ್ವಾಜ್ ರಾಜ್ಯದ ರಾಜಕಾರಣಿಗಳ ಕುರಿತು ತೀವ್ರ ಅಸಮಾಧಾನ ವ್ಯಕ್ತಪಡಿಸಿದರು.

ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ ಅವರಿಗೆ ದಿ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಎಂಜಿನಿಯರ್ಸ್ ಇಂಡಿಯಾದ ಲೈಫ್ ಫೆಲೋಶಿಪ್ ಪ್ರದಾನ ಮಾಡಿ ಶನಿವಾರ ಮಾತನಾಡಿದರು.

ಈ ಸುಸಂಸ್ಕೃತ ಹಾಗೂ ಸುಂದರ ರಾಜ್ಯದ ಜನರು ರಾಜಕಾರಣಿಗಳನ್ನು ಹೇಗೆ ಸಹಿಸಿಕೊಂಡಿದ್ದಾರೆ ಎಂಬುದೇ ನನಗೆ ಆಶ್ಚರ್ಯವುಂಟು ಮಾಡುತ್ತದೆ. ಇವರ ಜತೆಗೆ ಹೆಣಗಿ ನಾಲ್ಕೂವರೆ ವರ್ಷದಲ್ಲಿ ನನ್ನ ಆರೋಗ್ಯ ಶೇ.50 ರಷ್ಟು ಕ್ಷೀಣಿಸಿದೆ ಎಂದು ಬೇಸರ ವ್ಯಕ್ತಪಡಿಸಿದರು.

ರಾಜ್ಯದ ಮಾಜಿ ಮುಖ್ಯಮಂತ್ರಿ, ರೆಡ್ಡಿ ಸೇರಿ 12 ಜನ ಮಂತ್ರಿಗಳ ವಿಚಾರಣೆಗೆ ನಾನು ಕಾರಣನಾಗಿದ್ದೇನೆ. ಜನರ ಅಭಿಮತದಂತೆ ರಾಜ್ಯ ಸರ್ಕಾರ ನಡೆಯಬೇಕೆಂಬುದು ನನ್ನ ಅಭಿಲಾಷೆ ಎಂದು ಹೇಳಿದರು.

**ಕುಲಪತಿ ನೇಮಕ:** ಈ ಮೊದಲು ವಿಶ್ವವಿದ್ಯಾಲಯದ ಕುಲಪತಿಗಳನ್ನು ನೇಮಕ ಮಾಡುವ ಸಂಪೂರ್ಣ ಅಧಿಕಾರ ಕುಲಾಧಿಪತಿಗಳಿಗಿತ್ತು. ಈಗ ಶೋಧನಾ ಸಮಿತಿ ಮಾಡಿ 3 ಜನರ ಹೆಸರನ್ನು ಸೂಚಿಸಲಾಗುತ್ತದೆ. ಆ ತರುವಾಯ ಒಬ್ಬರ ಪರವಾಗಿ ಲಾಬಿ ಮಾಡುತ್ತಾರೆ. ಕೇಳಿದರೆ ಯುಜಿಸಿ ನಿಯಮ ಎನ್ನುತ್ತಾರೆ. ಹಾಗೆ ನೋಡಿದರೆ ಯುಜಿಸಿ ನಿಯಮವೇ ಸರಿಯಾಗಿಲ್ಲ. ಸಮಸ್ಯೆಗಳ ಮೇಲೆ ಪ್ರಯೋಗ ಮಾಡ ಹೊರಟಂತಿದೆ ಎಂದರು.




ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ ಅವರಿಗೆ ಲೈಫ್ ಫೆಲೋಶಿಪ್ ಪ್ರಶಸ್ತಿಯನ್ನು ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಶನಿವಾರ ಪ್ರದಾನ ಮಾಡಿದರು.

ಜಂಟಿ ಅಧಿವೇಶನ ಉದ್ದೇಶಿಸಿ ನಾನು ಮಾಡುವ ಭಾಷಣವನ್ನು ಯಾರು ಬರೆಯುತ್ತಾರೆ ಎಂಬುದೇ ಗೊತ್ತಿಲ್ಲ. ಆದರೂ ಓದಬೇಕು. ಯಾವುದೇ ಸರ್ಕಾರವಿದ್ದರೂ ಅದು ನನ್ನ ಸರ್ಕಾರ ಎನ್ನಬೇಕು. ಅದನ್ನು ಮಾಡದೇ ಹೋದರೆ ಅಸಂವಿಧಾನಿಕ ಎನ್ನುತ್ತಾರೆ.

। ಎಚ್.ಆರ್.ಭಾರದ್ವಾಜ್ ರಾಜ್ಯಪಾಲ

ದಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಇಂಡಿಯಾದ ಲೈಫ್ ಫೆಲೋಶಿಪ್ ಸ್ವೀಕರಿಸಿ ಮಾತನಾಡಿದ ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ, ಇಂದಿನ ಶಿಕ್ಷಣ ನೀತಿ ಸರಿಯಿಲ್ಲ. ಹಿಂದೆಲ್ಲಾ ಶಿಕ್ಷಕರ ಗುಣಮಟ್ಟಕ್ಕೆ ಒತ್ತು ಕೊಡಲಾಗುತ್ತಿತ್ತು. ಆದರೆ ಇಂದು ವಿದ್ಯಾರ್ಥಿಗಳ ಗುಣಮಟ್ಟಕ್ಕೆ ಒತ್ತು ನೀಡಲಾಗುತ್ತದೆ. ಕುಲಪತಿ ನೇಮಕ ಪ್ರಕ್ರಿಯೆ ಸರಿಯಿಲ್ಲ. ಮಹಾರಾಷ್ಟ್ರದಲ್ಲಿ ಶೋಧನಾ ಸಮಿತಿಯಲ್ಲಿದ್ದ ನಾವು ನಿಯಮದಂತೆ ಆಯ್ಕೆ ಮಾಡಿದ ಅಭ್ಯರ್ಥಿಯನ್ನೇ ಕುಲಾಧಿಪತಿಗಳು ಮಾನ್ಯ ಮಾಡಿದ್ದರು. ಆದರೆ ಈಗ ನಡೆಯುವ ನೇಮಕದಲ್ಲಿ ಲಾಬಿ ನಡೆಯುತ್ತಿದೆ ಎಂದು ಹೇಳಿದರು.

ನೈತಿಕತೆ ಮಾಯವಾಗಿ ಭ್ರಷ್ಟಾಚಾರ ತಾಂಡವವಾಡುತ್ತಿದೆ. ಇದಕ್ಕೆ ಕಡಿವಾಣ ಹಾಕಲು ಮಕ್ಕಳಿಗೆ ನೈತಿಕ ಶಿಕ್ಷಣ ಕೊಡಬೇಕು ಎಂದು ಸಲಹೆ ನೀಡಿದರು. ದಿ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ಸ್ ಇಂಡಿಯಾ ಅಧ್ಯಕ್ಷ ಅಶೋಕ್ ಕುಮಾರ್ ಬಾಸಾ, ಡಾ.ಎಲ್.ವಿ.ಮುರಳೀಕೃಷ್ಣ ರೆಡ್ಡಿ, ಡಾ.ವೂಡೆ ಪಿ.ಕೃಷ್ಣ ಉಪಸ್ಥಿತರಿದ್ದರು.



## ರಕ್ತದಾನ...

ಮಾಜಿ ಮೇಯರ್ ಕೆ.ಎಂ. ನಂಜಪ್ಪ ಅವರ 102ನೇ ಹುಟ್ಟುಹಬ್ಬದ ಪ್ರಯುಕ್ತ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ರಕ್ತದಾನ ಶಿಬಿರ ಆಯೋಜಿಸಿತ್ತು. ದೂರದರ್ಶನ ಕೇಂದ್ರ ಡಿಡಿಜಿ ಎನ್. ಚಂದ್ರಶೇಖರ್, ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಮತ್ತಿತರರು ಉಪಸ್ಥಿತರಿದ್ದರು.

4 ಭಾನುವಾರ 2 ಫೆಬ್ರವರಿ 2014
ವಿಜಯವಾಣಿ
BANGALORE

# ಹರಿದಾಸ ಸಾಹಿತ್ಯಕ್ಕೆ ಗೀತಾಚಾರ್ಯರ ಕೊಡುಗೆ ಅಪಾರ

ಹೆಸರಾಂತ ಸಾಹಿತಿಗಳಾದ ಪ್ರೊ. ಜಿ. ಅಶ್ವತ್ಥನಾರಾಯಣರು ನಾರಾಯಣಶರ್ಮ ಸಂಸ್ಕೃತಿ ಕೇಂದ್ರದ ದ್ವಿದಶಮಾನೋತ್ಸವ ಸಮಾರಂಭವನ್ನು ಉದ್ಘಾಟನೆ ಮಾಡುತ್ತ, ಹರಿದಾಸ ಸಾಹಿತ್ಯಕ್ಕೆ ಈ ಸಂಸ್ಥೆಯ ಮೂಲಕ ಡಾ. ನಾ. ಗೀತಾಚಾರ್ಯರು ಅಪಾರ ಕೊಡುಗೆ ನೀಡಿದ್ದಾರೆ. ಅವರ ತಂದೆಯವರೂ ಹರಿದಾಸರೂ ಆದ ನಾರಾಯಣಶರ್ಮರ ಸ್ಮರಣೆಯಲ್ಲಿ ದಾಸ ಸಾಹಿತ್ಯ ಪ್ರಚಾರಕ್ಕಾಗಿಯೇ ಸ್ಥಾಪಿಸಿದ ಈ ಸಂಸ್ಥೆಯಿಂದ ಕನ್ನಡಕ್ಕೆ ವಿಶಿಷ್ಟಾದ್ವೈತ ಪರಂಪರೆಯ ಸಾಹಿತ್ಯವನ್ನು ವಿನೂತನವಾಗಿ ಶೋಧಿಸಿ ಸಂಶೋಧಿಸಿ 20ಕ್ಕೂ ಹೆಚ್ಚು ಪುಸ್ತಕಗಳಲ್ಲಿ ಪ್ರಕಟಿಸಿರುವುದು ದೊಡ್ಡ ಕೆಲಸ. ಹರಿದಾಸ ಸಾಹಿತ್ಯವೆಂದರೆ ಕೇವಲ ದ್ವೈತವಲ್ಲ. ಅದ್ವೈತ-ವಿಶಿಷ್ಟಾದ್ವೈತಗಳು ಸೇರಿದ 'ತ್ರಿವೇಣಿ ಸಂಗಮ'ವೆನಿಸಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ ಎಂದರು. ಇವರ ಗುರುಗಳೂ ಅದ್ವೈತ ಹರಿದಾಸರನ್ನು ಪರಿಚಯಿಸಿದ ಹಿರಿಯ ವಿದ್ವಾಂಸರೂ ಆಗಿದ್ದ ಎಂ.ವಿ. ಸೀತಾರಾಮಯ್ಯನವರ ಹಾದಿಯಲ್ಲೇ ಮುಂದುವರೆದು 15ಕ್ಕೂ ಹೆಚ್ಚು ಜನ ಅಜ್ಞಾತ ಹರಿದಾಸರ 2000ಕ್ಕೂ ಅಧಿಕ ಅಪ್ರಕಟಿತ ಕೀರ್ತನೆಗಳನ್ನು ಕೊಟ್ಟಿದ್ದಾರೆ ಎಂದರು.

### ಕೀರ್ತನ ಸೌರಭ - ಪುಸ್ತಕ ಬಿಡುಗಡೆ

ಲಕ್ಷ್ಮೇಶನ ಊರಿನ ಹಿರಿಯ ಸಾಹಿತಿಗಳಾದ ಡಾ. ಡಿ.ಆರ್. ಪಾಂಡುರಂಗ ಮೇಲಿನ ಪುಸ್ತಕವನ್ನು ಬಿಡುಗಡೆ ಮಾಡುತ್ತ ನಾರಾಯಣಶರ್ಮ ಸಂಸ್ಕೃತಿ ಕೇಂದ್ರದ ಇಪ್ಪತ್ತು ವರ್ಷಗಳ ಸಾಧನೆಯ ಇಣುಕು ನೋಟವಾಗಿರುವ ಈ ಕೃತಿ ವಿಶಿಷ್ಟವಾದುದಾಗಿದೆ ಎಂದರು. ಈ ಸಂಸ್ಥೆಯ ಮೂಲಕ ಡಾ. ನಾ. ಗೀತಾಚಾರ್ಯರು ಪ್ರಕಟಿಸಿರುವ ಹರಿದಾಸ ಸಾಹಿತ್ಯ ಮತ್ತು ಆಳ್ವಾರ್ ಸಾಹಿತ್ಯ ಕೃತಿಗಳ ಬಗ್ಗೆ ನಾಡಿನ ಹೆಸರಾಂತ ವಿದ್ವಾಂಸರು, ವಿಮರ್ಶಕರು ಬರೆದಿರುವ ವಿಮರ್ಶಾ ಲೇಖನಗಳು ಮತ್ತು ಪತ್ರಗಳ ಸಂಕಲನವಾಗಿ ಇದು ಗಮನ ಸೆಳೆಯುತ್ತದೆ. ಡಾ. ಜಿ.ಎಸ್. ಶಿವರುದ್ರಪ್ಪ, ಪ್ರೊ. ಜಿ.ವಿ., ಡಾ.ವಿ.ಎಸ್.ಎಸ್. ಆಚಾರ್ಯ, ನೀಲತ್ತಹಳ್ಳಿ ಕಸ್ತೂರಿ, ಡಾ. ವಿಜಯ ಸುಬ್ಬರಾಜ್ ಮುಂತಾದ ಹೆಸರಾಂತರ ಈ ಸಂಸ್ಥೆಯ ಸಾಧನೆಗಳ ಬಗ್ಗೆ ಮೆಚ್ಚುಗೆಯ ಮಾತುಗಳಿವೆ. ಎಲ್ಲರೂ ಗೀತಾಚಾರ್ಯರ ಕೊಡುಗೆಗಳನ್ನು ಸರಿಯಾಗಿ ಗುರುತಿಸಿ ಗೌರವಿಸಿದ್ದಾರೆ. ಯಾವುದೇ ಒಂದು ಕೃತಿ ಪ್ರಕಟವಾದ ಮೇಲೆ ಓದುಗರನ್ನು ತಲುಪಬೇಕು, ಚರ್ಚೆಯಾಗಬೇಕು. ಅದು ಎಲ್ಲ ಕೃತಿಗಳಿಗೂ ಲಭಿಸುವುದಿಲ್ಲ. ಆದರೆ ಗೀತಾಚಾರ್ಯರ ಈ ಸಂಸ್ಥೆಯ ಕೃತಿಗಳಿಗೆ ಅಂತಹ ಅವಕಾಶ ಒದಗಿ ಉತ್ತಮ ಲೇಖನಗಳೇ ಬಂದಿವೆ. ಡಾ. ಗೀತಾಚಾರ್ಯರು ಈ ಸಂಸ್ಥೆ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತವಾಗಿ ದಾಖಲಾಗುವಂತಹ ಮಹತ್ವವಾದ್ದನ್ನು ಸಾಧಿಸಿ ಅಭಿನಂದನೀಯರಾಗಿದ್ದಾರೆ ಎಂದರು.

### ಧನ್ಯ ನಾರಾಯಣಶರ್ಮಣಃ

ಮುಖ್ಯ ಅತಿಥಿಗಳಾದ ಮೈಸೂರಿನ ಹರಿದಾಸ ವಿದ್ವಾಂಸ ಡಾ. ರಾಮಶೇಷನ್ ಇಪ್ಪತ್ತು ವರ್ಷಗಳ ಹಿಂದೆಯೇ ಹರಿದಾಸರಾದ ನಾರಾಯಣಶರ್ಮರನ್ನು ಅವರ ಧರ್ಮಪತ್ನಿ ನೇತ್ರದಾನಿ ಲಕ್ಷ್ಮೀದೇವಿಯವರನ್ನು ಕಂಡು ಮಾತನಾಡಿದ ಭಾಗ್ಯ ನನ್ನದು ಎಂದು ಸ್ಮರಿಸಿಕೊಂಡರು. ನಾನು ಕಂಡಿದ್ದ ಅಂತಹ ಪುಣ್ಯಜೀವಿಗಳ ಸುಪುತ್ರರಾದ ಡಾ. ಗೀತಾಚಾರ್ಯರು ಅವರ ಸ್ಮರಣೆಯಲ್ಲಿ ಈ ಸಂಸ್ಥೆಯನ್ನು ಕಟ್ಟಿ ಅವರ ಹಾದಿಯಾದ ವಿಶಿಷ್ಟಾದ್ವೈತ ಮಾರ್ಗವನ್ನು ಹಿಡಿದು ಕನ್ನಡ ಸಾಹಿತ್ಯಕ್ಕೆ ಗೀತಾಚಾರ್ಯರ ಸಾಧನೆ ಬಹಳ ದೊಡ್ಡದು ಎಂದರು. ಈ ಸಂಸ್ಥೆಯ ಮೂಲಕ ನಾರಾಯಣಶರ್ಮ ದಂಪತಿಗಳನ್ನು ಇಂದಿಗೂ ಜೀವಂತವಾಗಿ ಸಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡ ಹೆಜ್ಜಾಜಿಯಲ್ಲಿ 'ದಾಸರಮನೆ'ಯನ್ನು ಸ್ಮಾರಕ ಮಾಡಿ ಸಂರಕ್ಷಿಸುತ್ತಿದ್ದಾರೆ. ನೇತ್ರದಾನಿ ಲಕ್ಷ್ಮೀದೇವಿಯವರ ಸ್ಮರಣೆಯಲ್ಲಿ ಗ್ರಾಮ ಗ್ರಂಥಾಲಯ ತೆರೆದು ಗ್ರಾಮಾಂತರ ಜನರ ಜ್ಞಾನದಾಹವನ್ನು ತಣಿಸುವ ಮೂಲಕ ಇಡೀ ಊರನ್ನೇ ಸಾಂಸ್ಕೃತಿಕ ಕೇಂದ್ರವಾಗಿಸಿದ್ದಾರೆ.




ಗೀತಾಚಾರ್ಯರಂತಹ ಸಜ್ಜನರ- ಸಾಧಕರ ತಂದೆ ತಾಯಿಗಳಿಗೆ ಮಾತ್ರ ಇಂತಹ ಪುಣ್ಯ ಲಭಿಸಬಲ್ಲದು. ಇಂಥವರ ಸಂತತಿ ಸಾವಿರವಾಗಲಿ ಎಂದು ಶ್ಲಾಘಿಸಿದರು.

ಶ್ರೀವೈಷ್ಣವ ಕೀರ್ತನ ಸೌರಭ ನಾಡಿಗೆಲ್ಲ ಹಬ್ಬಿಸಿರುವ ನಾರಾಯಣಶರ್ಮ ಸಂಸ್ಕೃತಿ ಕೇಂದ್ರ ಸಂಸ್ಥೆಯ ಕಾರ್ಯಕ್ರಮಗಳ ಮೂಲಕ ಸಾಹಿತ್ಯ ವಲಯದಲ್ಲಿ ಪ್ರಸಿದ್ಧರಾಗಿರುವ ಡಾ. ಗೀತಾಚಾರ್ಯರು ನಮ್ಮ ಸಂಸ್ಥೆಯವರಾಗಿರುವುದು ನಮಗೆ ಹೆಮ್ಮೆಯೆನಿಸಿದೆ ಎಂದು ಮೆಚ್ಚುಗೆ ನುಡಿಗಳನ್ನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿಗಳೂ ಸಮಾಜ ಸೇವಕರೂ ಆದ ಡಾ. ವೂಡೆ ಪಿ. ಕೃಷ್ಣರವರು ಇವರ ಎಲ್ಲ ಕೆಲಸಗಳಿಗೂ ನಮ್ಮ ಬೆಂಬಲವಿರುತ್ತದೆ ಎಂದರು.

### ಸಾಂಸ್ಕೃತಿಕ ಕಾರ್ಯಕ್ರಮ

ಪ್ರಸಿದ್ಧ ಸಂಗೀತ ವಿದೂಷಿ ಸುಕನ್ಯ ವಿಜಯಕುಮಾರ್ ಮತ್ತು ತಂಡದವರು ನಾರಾಯಣಶರ್ಮರ ಗೀತೆಗಳ ಗಾಯನ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶ್ರೀವೈಷ್ಣವ ಹರಿದಾಸರ ಕೀರ್ತನೆಗಳ ಸೌರಭವನ್ನು ಸಭಿಕರಿಗೆಲ್ಲ ಸುಶ್ರಾವ್ಯವಾಗಿ ಹಾಡುವ ಮೂಲಕ ಉಣಬಡಿಸಿದರು. ತುಂಬಿದ ಸಭೆ ತಲೆದೂಗಿ ಮೆಚ್ಚುಗೆ ವ್ಯಕ್ತಪಡಿಸಿತು. ಕನ್ನಡ ಅಧ್ಯಾಪಕ, ಸಂಘಟಕ ಸಿಸಿರಾ ವಂದನಾರ್ಪಣೆ ಮಾಡಿದರು. ಸಂಸ್ಥೆಯ ಅಧ್ಯಕ್ಷರೂ ಸಾಹಿತಿ ವಿದ್ವಾಂಸರೂ ಆದ ಡಾ. ನಾ. ಗೀತಾಚಾರ್ಯರು ಅಧ್ಯಕ್ಷತೆ ವಹಿಸಿ ನಡೆಸಿಕೊಟ್ಟರು.

# ಶಸ್ತ್ರಾಸ್ತ್ರ ಒಪ್ಪಿಸಲು ಸೂಚನೆ

ಲೋಕಸಭಾ ಚುನಾವಣೆ 2014ರ ಅಂಗವಾಗಿ ನಡೆಯುವ ಮತದಾನ ಮತ್ತು ಮತ ಎಣಿಕೆ ಕಾರ್ಯ ಸುಗಮವಾಗಿ ನಡೆಸಲು ಯಾವುದೇ ರೀತಿಯ ಅಹಿತಕರ ಘಟನೆಗಳಿಗೆ ಎಡೆ ಮಾಡಿಕೊಡದಂತೆ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡಲು ಸಾರ್ವಜನಿಕರು ಹೊಂದಿರುವ ಆಯುಧ (ಗನ್/ರಿವಾಲ್ವರ್ ಇತ್ಯಾದಿ) ಗಳನ್ನು ಚುನಾವಣೆ ಮುಕ್ತಾಯವಾಗುವವರೆಗೆ ಅಂದರೆ ದಿನಾಂಕ: 28-5-2014ರವರೆಗೆ ರಾತ್ರಿ 12.00 ಗಂಟೆಯವರೆಗೆ ಸಂಬಂಧಪಟ್ಟ ಪೊಲೀಸ್ ಠಾಣೆಗೆ ಒಪ್ಪಿಸುವಂತೆ ಬೆಂಗಳೂರು ನಗರ ಜಿಲ್ಲೆ ಜಿಲ್ಲಾಧಿಕಾರಿ ಹಾಗೂ ಜಿಲ್ಲೆ ದಂಡಾಧಿಕಾರಿ ಡಾ. ಜಿ.ಎಸ್. ಪ್ರಕಾಶ್ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

# ಮತಗಟ್ಟೆ ಅಧಿಕಾರಿಯಿಂದ ಭಾವಚಿತ್ರ ಸಹಿತ ಮತದಾರರ ಚೀಟಿ ವಿತರಣೆ

ಮತದಾರರಿಗೆ ಅವರ ಮತಗಟ್ಟೆ ಹಾಗೂ ನೊಂದಣಿ ಸಂಖ್ಯೆಯ ಕುರಿತು ಮಾಹಿತಿ ನೀಡುವ ಭಾವಚಿತ್ರ ಸಹಿತದ ಮತದಾರರ ಚೀಟಿಯನ್ನು ವಿತರಿಸುವ ವಿಷಯಕ್ಕೆ ಸಂಬಂಧಿಸಿದಂತೆ ಭಾರತೀಯ ಚುನಾವಣಾ ಆಯೋಗವು ಕಾಲಕಾಲಕ್ಕೆ ಸೂಚನೆಗಳನ್ನು ನೀಡುತ್ತಿದೆ. ಭಾವಚಿತ್ರ ಸಹಿತದ ಮತದಾರರ ಚೀಟಿ ವಿತರಣಾ ವ್ಯವಸ್ಥೆಯನ್ನು ಇನ್ನಷ್ಟು ಸುಗಮಗೊಳಿಸಲು ಮತ್ತು ಚುನಾವಣೆಯಲ್ಲಿ ಪಾರದರ್ಶಕತೆಯನ್ನು ತರಲು ಚುನಾವಣಾ ಆಯೋಗವು ಇದೇ ಮಾರ್ಚ್ 21, 2014ರಂದು ವಿವರವಾದ ಸೂಚನೆ (ಸಂಖ್ಯೆ 464/ಐಎನ್‌ಎಸ್‌ಟಿ-ವಿಎಸ್/2014) ಯೊಂದನ್ನು ನೀಡಿದೆ.

### ಆಯೋಗ ನೀಡಿರುವ ಸೂಚನೆಯ ಅಂಶಗಳು:

* ಪ್ರತಿ ವಿಧಾನಸಭಾ ಕ್ಷೇತ್ರದ ನೊಂದಾಯಿತ ಮತದಾರರಿಗೆ ಚುನಾವಣಾ ನೊಂದಾವಣೆ ಅಧಿಕಾರಿಯಿಂದ ಪ್ರಾಮಾಣೀಕರಿಸಲ್ಪಟ್ಟ ಭಾವಚಿತ್ರ ಮತದಾರರ ಸಹಿತದ ಚೀಟಿಯನ್ನು ಮತಗಟ್ಟೆ ಅಧಿಕಾರಿ ನೀಡುತ್ತಾರೆ.

* ಭಾವಚಿತ್ರ ಸಹಿತದ ಮತದಾರರ ಚೀಟಿಯನ್ನು ವಿತರಿಸಲು ವೇಳಾಪಟ್ಟಿಯನ್ನು ಕ್ಷೇತ್ರದ ಚುನಾವಣಾಧಿಕಾರಿ ಸಿದ್ಧಪಡಿಸಬೇಕು. ಈ ವೇಳಾಪಟ್ಟಿಯ ಪ್ರತಿಯನ್ನು ಅವರು ಎಲ್ಲಾ ರಾಜಕೀಯ ಪಕ್ಷಗಳು ಹಾಗೂ ಮಾನ್ಯತೆ ಪಡೆದ ರಾಜಕೀಯ ಪಕ್ಷಗಳ ಮತಗಟ್ಟೆ ಏಜೆಂಟರು ಮತ್ತು ಅಭ್ಯರ್ಥಿಗಳಿಗೆ ನೀಡಬೇಕು. ಚೀಟಿ ವಿತರಣೆ ಸಂದರ್ಭದಲ್ಲಿ ಅಧಿಕಾರಿ ಜೊತೆ ರಾಜಕೀಯ ಪಕ್ಷಗಳ ಮತಗಟ್ಟೆ ಏಜೆಂಟರು ಕೈಜೋಡಿಸಬಹುದು.

* ಚೀಟಿಯನ್ನು ನೊಂದಾಯಿತ ಮತದಾರರಿಗೆ ಅಥವಾ ಕುಟುಂಬದ ಹಿರಿಯರಿಗೆ ವಿತರಿಸಬಹುದು. ಈ ಚೀಟಿಯನ್ನು ನೀಡಿದ ಬಳಿಕ ಅಧಿಕಾರಿ ಆ ಮತದಾರರ ಸಹಿ ಅಥವಾ ಹೆಬ್ಬೆಟ್ಟನ್ನು ಪುಸ್ತಕದಲ್ಲಿ ದಾಖಲಿಸಿಕೊಳ್ಳಬೇಕು. ಇದು ಮತದಾರರಿಗೆ ಚೀಟಿ ನೀಡಿರುವುದಕ್ಕೆ ಸಾಕ್ಷಿಯಾಗಿರುತ್ತದೆ.

* ವಿತರಣೆಗೊಳ್ಳದ ಚೀಟಿಯನ್ನು ಅಕಾರಾದಿ ಕ್ರಮದಲ್ಲಿರುವ ಮತದಾರರ ಪಟ್ಟಿಯೊಂದಿಗೆ ಮತದಾನದ ದಿನದಂದು ಪ್ರತಿ ಮತಗಟ್ಟೆಯ ಹೊರಗೆ ಇರಿಸಬೇಕು. ಈ ವಿತರಣೆ ಕಾರ್ಯ ಮತಗಟ್ಟೆ ಮಟ್ಟದ ಅಧಿಕಾರಿಯ ಮೇಲುಸ್ತುವಾರಿಯಲ್ಲಿ ನಡೆಯಬೇಕು. ಇದರಿಂದ ಚೀಟಿಯನ್ನು ಪಡೆಯದ ಮತದಾರರು ಮತದಾನಕ್ಕೆ ಮುಂಚಿತವಾಗಿ ತಮ್ಮ ಮತಗಟ್ಟೆಗಳಲ್ಲೇ ಚೀಟಿಯನ್ನು ಪಡೆಯಬಹುದು.

# ದ್ವಿತೀಯ ಪಿ.ಯು.ಸಿ. ಪರೀಕ್ಷೆ ಮೌಲ್ಯಮಾಪನ

ಮಾರ್ಚ್ 2014ರ ದ್ವಿತೀಯ ಪಿ.ಯು.ಸಿ. ಉತ್ತರ ಪತ್ರಿಕೆಗಳ ಮೌಲ್ಯಮಾಪನವು ದಿನಾಂಕ 01-04-2014ರಂದು ಪ್ರಾರಂಭವಾಗಲಿದೆ. ಬೆಂಗಳೂರು 18, ಮೈಸೂರು 6, ಬೆಳಗಾಂ 5, ಮಂಗಳೂರು 4, ದಾವಣಗೆರೆ 2, ಶಿವಮೊಗ್ಗ 2, ಒಟ್ಟು 37 ಮೌಲ್ಯಮಾಪನ ಕೇಂದ್ರಗಳನ್ನು ನಿಗದಿಪಡಿಸಲಾಗಿದೆ. ಒಟ್ಟು 19,506 ಮೌಲ್ಯಮಾಪಕರಿಗೆ ನೇಮಕಾತಿ ಆದೇಶಗಳನ್ನು ಈಗಾಗಲೇ ಸಂಬಂಧಪಟ್ಟ ಕಾಲೇಜುಗಳಿಗೆ ರವಾನಿಸಿದೆ.

ಇವರಲ್ಲಿ ಉಪ ಮುಖ್ಯ ಮೌಲ್ಯಮಾಪಕರ ಸಂಖ್ಯೆ 3,082 ಮತ್ತು ಸಹಾಯಕ ಮೌಲ್ಯಮಾಪಕರ ಸಂಖ್ಯೆ 16,424. ಎಲ್ಲಾ ಮೌಲ್ಯಮಾಪಕರು ನೇಮಕಾತಿ ಆದೇಶಗಳಲ್ಲಿ ಸೂಚಿಸಿರುವ ಸ್ಥಳ, ವಿಷಯ ಹಾಗೂ ದಿನಾಂಕಗಳಂದು ಮೌಲ್ಯಮಾಪನ ಕೇಂದ್ರಗಳಿಗೆ ಹಾಜರಾಗುವಂತೆ ಸೂಚಿಸಲಾಗಿದೆ ಎಂದು ಪದಿವಪೂರ್ವ ಶಿಕ್ಷಣ ಇಲಾಖೆ ನಿರ್ದೇಶಕ ಡಾ. ರಾಮೇಗೌಡ ಪ್ರಕಟಣೆಯಲ್ಲಿ ತಿಳಿಸಿದ್ದಾರೆ. ಮೌಲ್ಯಮಾಪನ ಕಾರ್ಯವು ಕಡ್ಡಾಯವಾಗಿದ್ದು, ಗೈರು ಹಾಜರಾದವರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು ಎಂದು ಪ್ರಕಟಣೆ ತಿಳಿಸಿದೆ.

# ಕರ್ನಾಟಕದಲ್ಲಿ ನಡೆಸಿದ ಹೋರಾಟದಿಂದ ಶೇ.50 ಆರೋಗ್ಯ ಹಾಳು: ಭಾರದ್ವಾಜ್

## ದಾವಣಗೆರೆ ವಿಶ್ವವಿದ್ಯಾಲಯದ ಕುಲಪತಿ ನೇಮಕ ಕುರಿತ ಆಕ್ಷೇಪಕ್ಕೆ ತೀವ್ರ ಅಸಮಾಧಾನ

ಕ.ಪ್ರ.ವಾರ್ತೆ | ಬೆಂಗಳೂರು | ಫೆ.1

'ಕಳೆದ ನಾಲ್ಕೂವರೆ ವರ್ಷ ಕರ್ನಾಟಕದಲ್ಲಿ ನಡೆಸಿದ ಹೋರಾಟದಲ್ಲಿ ನನ್ನ ಆರೋಗ್ಯ ಶೇ. 50ರಷ್ಟು ಹಾಳಾಗಿದೆ..!' ಹೀಗೆ ಹೇಳಿದ್ದು ಬೇರೆ ಯಾರೂ ಅಲ್ಲ. ರಾಜ್ಯದ ಪ್ರಥಮ ಪ್ರಜೆ, ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಅವರು.

ದಿ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ (ಇಂಡಿಯಾ)–ಕರ್ನಾಟಕ ನಗರದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಪದ್ಮಶ್ರೀ ಡಾ.ಎಚ್.ಸಿ. ವಿಶ್ವೇಶ್ವರಯ್ಯ ಅವರಿಗೆ 'ಜೀವಮಾನದ ಗೌರವ ಫೆಲೋಶಿಪ್' ಪ್ರದಾನ ಮಾಡಿ ಮಾತನಾಡಿದ ಅವರು, ದಾವಣಗೆರೆ ವಿಶ್ವವಿದ್ಯಾಲಯದ ಕುಲಪತಿ ನೇಮಕ ಹಾಗೂ ಅಧಿವೇಶನದಲ್ಲಿ ತಮ್ಮ ಭಾಷಣದ ಬಗ್ಗೆ ಎದ್ದಿರುವ ಅಪಸ್ವರಗಳನ್ನು ಪ್ರಸ್ತಾಪಿಸಿದರು.

ಯುಜಿಸಿ ನಿರ್ದೇಶನದ ಪ್ರಕಾರ ಶೋಧನಾ ಸಮಿತಿ ರಚಿಸಿದ್ದು ಅವರು ಸೂಚಿಸಿದ ಮೂರು ಹೆಸರಿನಲ್ಲಿ ಒಬ್ಬರ ಹೆಸರನ್ನು ಆಯ್ಕೆ ಮಾಡಲಾಗಿದೆ. ಮುಖ್ಯಮಂತ್ರಿ ಸಚಿವರನ್ನಾಗಿ ಆಯ್ಕೆ ಮಾಡಿದ ವ್ಯಕ್ತಿ ಅಧಿಕಾರ ಸ್ವೀಕರಿಸುವ ಸಂದರ್ಭದಲ್ಲಿ ಅವರ ಆಯ್ಕೆ ಬಗ್ಗೆ ತಕರಾರು ಎತ್ತದೇ ತಾವು ಪ್ರಮಾಣವಚನ ಬೋಧಿಸುವುದಿಲ್ಲವೇ ಎಂದು ಪ್ರಶ್ನಿಸಿದ ರಾಜ್ಯಪಾಲರು, ಕುಲಪತಿ ಆಯ್ಕೆ ಕುಲಾಧಿಪತಿ(ರಾಜ್ಯಪಾಲ)ಯ ಪರಮಾಧಿಕಾರ. ಆದರೆ ಕುಲಪತಿ ನೇಮಕಕ್ಕೆ ಅಪಸ್ವರ ಎತ್ತುವ ಮೂಲಕ ತಮ್ಮ ಪರಮಾಧಿಕಾರವನ್ನೇ ಪ್ರಶ್ನಿಸಲಾಗುತ್ತಿದೆ. ಕುಲಪತಿ ನೇಮಕ ಇತ್ಯಾದಿ ವಿಷಯಗಳಲ್ಲೂ ಮಧ್ಯಪ್ರವೇಶಿಸುವ ಮೂಲಕ ವಿಶ್ವವಿದ್ಯಾಲಯಗಳನ್ನೂ ರಾಜಕಾರಣಿಗಳು ತಮ್ಮ ಸುಪರ್ದಿಗೆ ತೆಗೆದುಕೊಳ್ಳಲು ಹವಣಿಸುತ್ತಿರುವುದರಿಂದ ಹೀಗಾಗುತ್ತಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು. ಅದೇ ರೀತಿ ಅಧಿವೇಶನದ ಭಾಷಣದ ಬಗ್ಗೆ ಪ್ರಸ್ತಾಪಿಸಿದ ಅವರು ಸರ್ಕಾರ ರಚಿಸಿದ ಭಾಷಣವನ್ನು ಕೆಲವೊಮ್ಮೆ ತಮಗೆ ಸರಿ ಎನಿಸದಿದ್ದರೂ ಓದಬೇಕಾದ್ದು ಶಿಷ್ಟಾಚಾರ.

ಹೀಗೆ ಈ ವಿಷಯಗಳಲ್ಲಿ ಕೇಳಿ ಬಂದಿರುವ ಅಪಸ್ವರಗಳನ್ನು ಪ್ರಸ್ತಾಪಿಸಿದ ಅವರು, ಕಳೆದ ನಾಲ್ಕೂವರೆ ವರ್ಷದ ಕರ್ನಾಟಕದಲ್ಲಿ ನಡೆಸಿರುವ ಹೋರಾಟದಲ್ಲಿ ತಮ್ಮ ಆರೋಗ್ಯ ಶೇ. 50ರಷ್ಟು ಹಾಳಾಗಿದೆ. ಇಲ್ಲಿನ ತೊಂದರೆಯಿಂದ ಪಾರಾಗುವುದು ಹೇಗೆ ಎಂದು ನೀವು ಎಂಜಿನಿಯರುಗಳೇ ಹೇಳಬೇಕು ಎಂದ ಅವರು, ಇಂಥವುಗಳಿಂದ ಕರ್ನಾಟಕ ಅದು ಹೇಗೆ ಪಾರಾಗುತ್ತದೋ ಎಂದು ಅಚ್ಚರಿ ವ್ಯಕ್ತಪಡಿಸಿದರು. ಬಲಿಷ್ಠ ದೇಶದ ನಿರ್ಮಾಣದಲ್ಲಿ ಎಂಜಿನಿಯರುಗಳ ಪಾತ್ರ ಮಹತ್ವದ್ದು ಎಂದ ಅವರು ಸರ್ ಎಂ.ವಿಶ್ವೇಶ್ವರಯ್ಯ ಅವರಂಥ ಎಂಜಿನಿಯರುಗಳ ಸಂಖ್ಯೆ ಹೆಚ್ಚಾಗಬೇಕು ಎಂದು ಆಶಿಸಿದರು.

ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ, ದಿ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಅಧ್ಯಕ್ಷ ಅಶೋಕ್ ಕುಮಾರ್ ಬಾಸಾ, ಉಪಾಧ್ಯಕ್ಷ ಡಾ. ಎಲ್.ವಿ.ಮುರಳೀಕೃಷ್ಣ ರೆಡ್ಡಿ, ದಿ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್(ಇಂಡಿಯಾ)–ಕರ್ನಾಟಕ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಹಾಜರಿದ್ದರು.



ದಿ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್(ಇಂಡಿಯಾ)–ಕರ್ನಾಟಕ ನಗರದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಪದ್ಮಶ್ರೀ ಡಾ.ಎಚ್.ಸಿ.ವಿಶ್ವೇಶ್ವರಯ್ಯ ಅವರಿಗೆ ರಾಜ್ಯಪಾಲ ಹಂಸರಾಜ್ ಭಾರದ್ವಾಜ್ ಅವರು ಜೀವಮಾನದ ಗೌರವ ಫೆಲೋಶಿಪ್ ಪ್ರದಾನ ಮಾಡಿದರು.

- ಕುಲಪತಿ ನೇಮಕ ರಾಜ್ಯಪಾಲರ ಪರಮಾಧಿಕಾರ; ಇದನ್ನು ಕಸಿಯಲು ರಾಜಕಾರಣಿಗಳ ಯತ್ನ
- ಸರ್ಕಾರ ರಚಿಸಿದ ಭಾಷಣ ತಮಗೆ ಸರಿ ಕಾಣದಿದ್ದರೂ ಅದನ್ನು ಓದುವುದು ಶಿಷ್ಟಾಚಾರ

# ಜಗತ್ತು ವಿನಾಶದ ಅಂಚಿಗೆ ಹೋಗದಿರಬೇಕಾದರೆ ಬ್ರಹ್ಮ ಸಮಾಜದಂತಹ ಸಂಸ್ಥೆಗಳು ಪ್ರಬಲವಾಗಬೇಕು

ನಮ್ಮಲ್ಲಿ ಶೇ. 90ರಷ್ಟು ಒಳ್ಳೆಯವರೇ ಇದ್ದಾರೆ. ಶೇ. 10ರಷ್ಟು ಮಾತ್ರ ಕೆಟ್ಟವರು. ಇಷ್ಟೊಂದು ಸಂಖ್ಯೆಯಲ್ಲಿ ಒಳ್ಳೆಯವರಿದ್ದರೂ ತಮ್ಮ ಎದುರಿನಲ್ಲೇ ಏನೇ ಅನ್ಯಾಯ ನಡೆಯುತ್ತಿದ್ದರೂ, ತಮಗೇನೂ ಸಂಬಂಧವಿಲ್ಲದಂತೆ ಕಣ್ಣುಮುಚ್ಚಿ ಕುಳಿತಿರುತ್ತಾರೆ. ಹೀಗಾಗಿ ಶೇ. 10ರಷ್ಟಿರುವ ಕೆಟ್ಟವರೇ ವಿಜೃಂಭಿಸುತ್ತಾರೆ. 2035ರ ವೇಳೆಗೆ ಜಗತ್ತಿನಲ್ಲಿ ಯಾವ ಬಡ ರಾಷ್ಟ್ರವೂ ಇರುವುದಿಲ್ಲ ಎಂದು ಬಿಲ್ ಗೇಟ್ಸ್ ತಮ್ಮ ದೂರದೃಷ್ಟಿಯಿಂದ ಹೇಳಿದ್ದಾರೆ. ಇದು ಸಾಧ್ಯವಾಗಬೇಕಾದರೆ ಜಗತ್ತಿನಲ್ಲಿ ಸಂಪೂರ್ಣವಾಗಿ ಶಾಂತಿ ನೆಮ್ಮದಿ ನೆಲೆಸಿರಬೇಕು. ಪ್ರಪಂಚದ ಎಲ್ಲಾ ರಾಷ್ಟ್ರಗಳೂ ಮಿಲಿಟರಿ ವ್ಯವಸ್ಥೆಗಾಗಿ ಮಾಡುತ್ತಿರುವ ವೆಚ್ಚ ಗಮನಿಸಿದರೆ, ಪ್ರತಿಯೊಬ್ಬ ವ್ಯಕ್ತಿಯ ತಲೆಯ ಮೇಲೆ 18000 ರೂ.ಗಳ ವೆಚ್ಚವಾಗುತ್ತಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಶೇ. 15ರಷ್ಟಿದ್ದ ಅಕ್ಷರಸ್ಥರ ಸಂಖ್ಯೆ ಈಗ ದಿನನಿತ್ಯದ ಸಂಗತಿಗಳಾಗಿವೆ. ಮೊದಲನೇ ಮಹಾಯುದ್ಧದಲ್ಲಿ 90 ಲಕ್ಷ ಜನ ಸತ್ತರು. ಎರಡನೇ ಮಹಾಯುದ್ಧದಲ್ಲಿ 8 ಕೋಟಿ ಜನ ಮಡಿದರು. ಮೂರನೇ ಮಹಾಯುದ್ಧವೇನಾದರೂ ಸಂಭವಿಸಿದರೆ ಇಡೀ ವಿಶ್ವವೇ ನಾಶವಾಗುತ್ತದೆ. ಇಂತಹುದು ಸಂಭವಿಸದಿರಬೇಕಾದರೆ, ಬ್ರಹ್ಮ ಸಮಾಜದಂತಹ ಸಂಸ್ಥೆಗಳು ಪ್ರಬಲವಾಗಬೇಕು ಎಂದು ಪ್ರೊ. ಡಾ. ಉದಯಕುಮಾರ್ ಅವರು ಕಳಕಳಿಯಿಂದ ವಿನಂತಿಸಿಕೊಂಡರು.

ಅವರು ಗಣರಾಜ್ಯೋತ್ಸವ ದಿನದಂದು ಶಿವಾಜಿನಗರದ ಗಂಗಾಧರಶೆಟ್ಟಿ ರಸ್ತೆಯಲ್ಲಿರುವ ಬ್ರಹ್ಮ ಮಂದಿರದಲ್ಲಿ ಬೆಂಗಳೂರು ಬ್ರಹ್ಮ ಸಮಾಜ ಹಾಗೂ ಅರಳೇಪೇಟೆ ಮತ್ತು ಬಸವನಗುಡಿ ಬ್ರಹ್ಮ ಸಮಾಜಗಳ ಸಂಯುಕ್ತ ಆಶ್ರಯದಲ್ಲಿ ನಡೆದ 184ನೇ ಮಾಘೋತ್ಸವ ಹಾಗೂ ಬ್ರಹ್ಮ ಸಮಾಜದ ಸ್ಥಾಪನಾ ದಿನ ಸಮಾರಂಭದಲ್ಲಿ ಮುಖ್ಯ ಉಪನ್ಯಾಸಕರಾಗಿ ಭಾಗವಹಿಸಿ ಇಂದಿನ ಜಗತ್ತಿನಲ್ಲಿ ಬ್ರಹ್ಮ ಸಮಾಜ ಕುರಿತು ಮಾತನಾಡಿದರು.

ಬ್ರಹ್ಮ ಸಮಾಜ ಸ್ಥಾಪಿಸಿದ ರಾಜಾರಾಮ ಮೋಹನರಾಯರದ್ದು ಅಭೂತಪೂರ್ವ ವ್ಯಕ್ತಿತ್ವ. ಬ್ರಾಹ್ಮಣರಾಗಿ ಜನಿಸಿದರೂ ಹಿಂದುಳಿದವರಿಗಾಗಿ, ಶೋಷಿತರಿಗಾಗಿ ತಮ್ಮ ಬದುಕನ್ನೇ ಮುಡುಪಾಗಿಟ್ಟಿದ್ದರು. ತಮ್ಮ ಅತ್ತಿಗೆಯ ಸಹಗಮನವಾಚರಿಸಿದುದನ್ನು ಕಂಡು ಬಾಲ್ಯದಿಂದಲೇ ಇಂತಹ ಹೀನ ಪದ್ಧತಿಯ ಬಗ್ಗೆ ಹೋರಾಟ ಮನೋಭಾವ ಬೆಳೆಸಿಕೊಂಡರು. ಇವರ ಸಂಘಟಿತ ಹೋರಾಟದ ಫಲವಾಗಿ, ಅಂದಿನ ಬ್ರಿಟಿಷ್ ಸರ್ಕಾರ 1829ರಲ್ಲಿ ಸತಿ ಸಹಗಮನ ಪದ್ಧತಿಯನ್ನು ನಿಷೇಧಿಸಿತು. ಮಹಿಳೆಯರ ಸಮಾನತೆಗಾಗಿ, ವಿಧವಾ ವಿವಾಹಕ್ಕಾಗಿ ಹೋರಾಡಿದರು. ವಿಗ್ರಹ ಆರಾಧನೆಗೆ ವಿರೋಧವಾಗಿದ್ದ ಅವರು ವಿದ್ಯೆಯೇ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಎಂದು ಭಾವಿಸಿ ಆ ನಿಟ್ಟಿನಲ್ಲಿ ಜೀವನ ಪರ್ಯಂತ ಶ್ರಮಿಸಿದ್ದರು. ಅವರು ನಿಧನರಾಗಿ ಸುಮಾರು 200 ವರ್ಷಗಳಾಗುತ್ತಾ ಬಂದಿದೆ. ಇನ್ನು ಮುಂದಿನ 200 ವರ್ಷಗಳಾದರೂ ಇಂತಹ ಇನ್ನೊಬ್ಬ ಮಹಾನ್ ವ್ಯಕ್ತಿ ಹುಟ್ಟಿಬರುವುದು ಅಸಾಧ್ಯ ಎಂದು ಉದಯಕುಮಾರ್ ಹೇಳಿದರು.

ಬ್ರಹ್ಮ ಸಮಾಜ ಜಾತಿ, ಧರ್ಮ, ಭೇದಭಾವ ಮಾಡದೆ ಎಲ್ಲರನ್ನೂ ತನ್ನತ್ತ ಸೆಳೆದಿದೆ. ಅರುಣಾ ಆಸಫ್ ಅಲಿ, ಜಗದೀಶ್ ಚಂದ್ರಬೋಸ್, ಸುಚೇತಾ ಕೃಪಲಾನಿ, ಸರೋಜಿನಿ ನಾಯ್ಡು, ರವೀಂದ್ರನಾಥ ಟಾಗೋರ್ ಮೊದಲಾದ ದಿಗ್ಗಜರೆಲ್ಲರೂ ಬ್ರಹ್ಮ ಸಮಾಜದಲ್ಲಿದ್ದರು ಎಂದು ತಿಳಿಸಿದ ಉದಯಕುಮಾರ್, ಉತ್ಸಾಹಿ ಯುವಕರು ಹೆಚ್ಚು ಹೆಚ್ಚಾಗಿ ಬ್ರಹ್ಮ ಸಮಾಜದ ಸದಸ್ಯರಾಗಬೇಕು. ನಾನೂ ಗೆಲ್ಲಬೇಕು, ಇತರರೂ ಗೆಲ್ಲಬೇಕು ಎಂಬ ಮನೋಭಾವ ಪ್ರತಿಯೊಬ್ಬರಲ್ಲೂ ಇರಬೇಕು. ನಾವೆಲ್ಲರೂ ಪರಸ್ಪರ ಸಂಬಂಧಿಗಳು ಎಂಬ ಭಾವನೆ ಬೆಳೆಸಿಕೊಳ್ಳಬೇಕು ಎಂದು ಕರೆ ನೀಡಿದರು. ನಗರದ ಕರುಣಾಶ್ರಯ ಸಂಸ್ಥೆ ಕ್ಯಾನ್ಸರ್ ರೋಗಿಗಳ ಸೇವೆ ಮಾಡುತ್ತಿರುವುದನ್ನು ಪ್ರಶಂಸಿಸಿದ ಅವರು ಅದೇ ರೀತಿ ನೀವೂ ಸಾಮಾನ್ಯ ಜನರ ಆರೋಗ್ಯ ಸೇವೆಯಲ್ಲಿ ತೊಡಗಿಕೊಳ್ಳಿ ಎಂದು ಬ್ರಹ್ಮ ಸಮಾಜದ ಸದಸ್ಯರಲ್ಲಿ ಮನವಿ ಮಾಡಿದರು.

ಕಾರ್ಯಕ್ರಮದ ನಿರೂಪಣೆ ಮಾಡಿದ ಡಾ. ವೂಡೆ ಪಿ. ಕೃಷ್ಣ ಅವರು ಬ್ರಹ್ಮ ಸಮಾಜ ಸದ್ದುಗದ್ದಲವಿಲ್ಲದೆ ಆಧ್ಯಾತ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಸಮಾಜ 140 ವರ್ಷಗಳ ಹಿಂದೆ ಕ್ವೀನ್ಸ್ ರಸ್ತೆಯಲ್ಲಿ ಸ್ಥಾಪಿಸಿರುವ ಪ್ರೌಢಶಾಲೆ ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದ ಹೆಣ್ಣು ಮಕ್ಕಳಿಗೆ ವಿದ್ಯಾದಾನ ಮಾಡುತ್ತಿದೆ ಎಂದು ತಿಳಿಸಿದರು.

ಸರೋಜಿತ್ ರಾಯ್ ದಂಪತಿಗಳು ಹಾಗೂ ಸ್ವಾಗತ ಮಿತ್ರ ಮತ್ತು ತಂಡದವರು ಆಕರ್ಷಕ ರವೀಂದ್ರ ಸಂಗೀತ ಪ್ರಸ್ತುತಪಡಿಸಿದರು. ಸಮಾಜದ ಅಧ್ಯಕ್ಷ ಡಾ. ಅಶೋಕ ಗುರುದಾಸ್ ಸ್ವಾಗತಿಸಿದರು. ಕಾರ್ಯದರ್ಶಿ ಡಬ್ಲ್ಯೂ. ಎಚ್. ದೇವಕುಮಾರ್ ವಂದಿಸಿದರು. ಜಂಟಿ ಕಾರ್ಯದರ್ಶಿ ಆರ್. ಜ್ಯೋತಿ ಮನವಿ, ಅರಳೇಪೇಟೆ ಬ್ರಹ್ಮ ಸಮಾಜದ ಅಧ್ಯಕ್ಷ ಬಿ.ಪಿ. ಚಂದ್ರಶೇಖರ ಉಪಸ್ಥಿತರಿದ್ದರು. ಸಮಾರಂಭದ ನಂತರ ವೂಡೆ ಪ್ರತಿಷ್ಠಾನದಿಂದ ಪ್ರೀತಿ ಭೋಜನದ ವ್ಯವಸ್ಥೆಯಾಗಿತ್ತು.




ಶನಿವಾರ
18 ಜನವರಿ 2014



ಕರ್ನಾಟಕ ಗಾಂಧೀ ಸ್ಮಾರಕ ನಿಧಿ ನಗರದ ಗಾಂಧಿಭವನದಲ್ಲಿಂದು ಆಯೋಜಿಸಿದ್ದ ಪ್ರಾಂತೀಯ ಸಭೆಯಲ್ಲಿ ಕೇಂದ್ರ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಗೋಪಿನಾದನ್ ನಾಯರ್, ಹಾಗೂ ಸ್ಮಾರಕ ನಿಧಿ ರಾಜ್ಯಾಧ್ಯಕ್ಷ ಡಾ. ಹೊ. ಶ್ರೀನಿವಾಸಯ್ಯ, ಪ್ರೊ. ವುಡೇ ಪಿ.ಕೃಷ್ಣ, ಹೆಚ್.ಬಿ. ದಿನೇಶ್ ಮತ್ತಿತರರು ಇದ್ದಾರೆ

ಈ ಸಂಜೆ
04 ಜನವರಿ, ಶನಿವಾರ, 2014



ಆದಿಚುಂಚನಗಿರಿಯಲ್ಲಿ ನಡೆದ ರಾಜ್ಯಮಟ್ಟದ ಸಂಸ್ಕೃತೋತ್ಸವ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಗಾಂಧಿವಾದಿ ಡಾ. ಹೊ. ಶ್ರೀನಿವಾಸಯ್ಯ ಬಹುಮಾನ ವಿತರಿಸಿದರು. ಡಬ್ಲ್ಯು. ಪಿ. ಕೃಷ್ಣ, ಸಂಸ್ಕೃತ ವಿವಿ ಕುಲಪತಿ ಮಲ್ಲೇಪುರಂ ಜಿ. ವೆಂಕಟೇಶ್, ಸೂರ್ಯಕಾಂತ ಪಂಡಿತ್, ಆರ್. ನರಸಿಂಹಯ್ಯ, ಪ್ರೊ. ಸಿ. ನಂಜುಂಡಯ್ಯ ಮತ್ತಿತರರು ಹಾಜರಿದ್ದರು.